ಅಂಬಿಕಾತನಯದತ್ತರ

# ಕುಣಿಯೋಣು ಬಾ



ಸಂಪಾದಕರು:

ಡಾ॥ ವಾಮನ ಬೇಂದ್ರೆ



# ಕುಣಿಯೋಣು ಬಾ

(ಚಿಕ್ಕಮಕ್ಕಳಿಗಾಗಿ ಅಂಬಿಕಾತನಯದತ್ತರ ಆಯ್ದ ಕವನಗಳು)

"ವರಕವಿ ಡಾ॥ ದ. ರಾ. ಬೇಂದ್ರೆ ವಿರಚಿತ"

# ಕುಣಿಯೋಣು ಬಾ

(ಚಿಕ್ಕಮಕ್ಕಳಿಗಾಗಿ ಅಂಬಿಕಾತನಯದತ್ತರ ಆಯ್ದ ಕವನಗಳ ಸಂಕಲನ)

ಸಂಪಾದಕರು :

**ಡಾ॥ ವಾಮನ ಬೇಂದ್ರೆ**

ಸಹ ನಿರ್ದೇಶಕರು,

ವರಕವಿ ಡಾ॥ ದ. ರಾ. ಬೇಂದ್ರೆ

ಸಂಶೋಧನ ಸಂಸ್ಥೆ ಹಾಗೂ ಬೇಂದ್ರೆ ಸಂಗೀತ ಅಕಾಡೆಮಿ.




ಪ್ರಕಾಶಕರು :

ಡಾ॥ ಕೆ. ಎಸ್. ಶರ್ಮಾ, ನಿರ್ದೇಶಕರು,

ವರಕವಿ ಡಾ॥ ದ. ರಾ. ಬೇಂದ್ರೆ ಸಂಶೋಧನ ಸಂಸ್ಥೆ

ಹಾಗೂ ಬೇಂದ್ರೆ ಸಂಗೀತ ಅಕಾಡೆಮಿ,

'ಶ್ರಮಚೇತನ', ಬಸವೇಶ್ವರನಗರ, ಗೋಕುಲ ರಸ್ತೆ, ಹುಬ್ಬಳ್ಳಿ-೩೦

* KUNIYONU BAA
(A Collection of Poems by DR. D. R. BENDRE)
* Edited by : Dr. Vaman Bendre.
* D. T. P. : Sri Iranna B. Noolvi, Dr. K. S. Sharma I. T. C., Hubli
* Pages : xvi+32+8=56
* Cover Design by : Sri.Ravindra Shirolkar, Dharwad.
* Art by : 'Kusuresh'
* Published by : Dr. K. S. Sharma,
Director, Poet Laureate Dr.D.R.Bendre Research Institute and Bendre Sangeeth Academy, "Vishwashrama Chetana", Gokul Road, Hubli- 580 030. (M : 9986801909)
* First Edition : 17-12-90, Second Edition : 15-8-2001, Third Edition : 2-1-2018
* Price : Rs.30-00

* "ಕುಣಿಯೋಣು ಬಾ" – ವರಕವಿ ಡಾ॥ ದ. ರಾ. ಬೇಂದ್ರೆ ಯವರ ಆಯ್ದ ಕವನಗಳ ಸಂಗ್ರಹ :
* ಸಂಪಾದಕರು : ಡಾ॥ ವಾಮನ ಬೇಂದ್ರೆ

* ಪುಟ ವಿನ್ಯಾಸ : ಶ್ರೀ ಈರಣ್ಣ ಬ. ನೂಲ್ವಿ, ಡಾ॥ ಕೆ. ಎಸ್. ಶರ್ಮಾ ಸಮೂಹ ಸಂಸ್ಥೆಗಳು, ಹುಬ್ಬಳ್ಳಿ
* ಪುಟಗಳು : xvi+೩೨+೮
* ರಕ್ಷಾ ಕವಚ : ಶ್ರೀ ರವೀಂದ್ರ ಶಿರೋಳಕರ, ಧಾರವಾಡ
* ಕಲೆ : 'ಕುಸುರೇಶ'
* ಮೊದಲ ಮುದ್ರಣ : ೧೭-೧೨-೧೯೯೦, ಎರಡನೆಯ ಮುದ್ರಣ : ೧೫-೮-೨೦೦೧,
ಮೂರನೆಯ ಮುದ್ರಣ : ೨-೧-೨೦೧೮
* ಬೆಲೆ : ರೂ.೩೦-೦೦
* ಮುದ್ರಕರು : ಶರ್ಮಾ ಮುದ್ರಣಾಲಯ, ೪, ಪತ್ರಕರ್ತರ ಕಾಲೋನಿ, ಹುಬ್ಬಳ್ಳಿ-೩೨
* ಪ್ರಕಾಶಕರು : ಡಾ॥ ಕೆ. ಎಸ್. ಶರ್ಮಾ,
ನಿರ್ದೇಶಕರು, ವರಕವಿ ಡಾ॥ ದ. ರಾ. ಬೇಂದ್ರೆ ಸಂಶೋಧನಾ ಸಂಸ್ಥೆ ಹಾಗೂ ಬೇಂದ್ರೆ ಸಂಗೀತ ಅಕಾಡೆಮಿ,
"ವಿಶ್ವ ಶ್ರಮಚೇತನ", ಗೋಕುಲ ರಸ್ತೆ, ಬಸವೇಶ್ವರ ನಗರ, ಹುಬ್ಬಳ್ಳಿ-೫೮೦ ೦೩೦ (ಮೊ : ೯೯೮೬೮೦೧೯೦೯)
* ಪುಸ್ತಕಗಳಿಗಾಗಿ ಬರೆಯಿರಿ :
ಶ್ರೀಮಾತಾ ಪ್ರಕಾಶನ, ವಿಶ್ವಶ್ರಮ ಚೇತನ, ಗೋಕುಲ ರಸ್ತೆ, ಹುಬ್ಬಳ್ಳಿ – ೫೮೦ ೦೩೦
ದೂರವಾಣಿ : ೦೮೩೬-೨೩೩೦೪೭೬

ರವೀಂದ್ರ ಪುಸ್ತಕಾಲಯ,
ಚಾಮರಾಜಪೇಟೆ, ಸಾಗರ – ೫೭೭ ೪೦೧, ಶಿವಮೊಗ್ಗ ಜಿಲ್ಲೆ, ದೂರವಾಣಿ : ೦೮೧೮೩-೨೨೮೭೧೬ (ಕ).

# ಅರ್ಪಣೆ

## ಲಕ್ಷ್ಮೀಬಾಯಿ ದತ್ತಾತ್ರೇಯ ಬೇಂದ್ರೆ



ಜನನ : ೧೨-೪-೧೯೦೬ ಮರಣ : ೧೭-೮-೧೯೬೬

ಸಂಸಾರದ ಅನಂತ ಕಷ್ಟಗಳಲ್ಲಿಯೂ
ಜೀವನೋತ್ಸಾಹವನ್ನು ಕಳೆದುಕೊಳ್ಳದೆ
ನಮ್ಮ ಬಾಳು ಸಫಲವಾಗುವಂತೆ
ಸತತವಾಗಿ ತಪಸ್ಸನ್ನು ಮಾಡಿದ
ನಮ್ಮ ಗೌರವಾನ್ವಿತ ತಾಯಿಗೆ
ಅಂಬಿಕಾತನಯದತ್ತರ ಸಮಸ್ತ
ಗ್ರಂಥರತ್ನಗಳನ್ನು–ಸ್ಮಾರಕ ಗ್ರಂಥ-
ಮಾಲೆಯಲ್ಲಿ ಪೋಣಿಸಿ ಅರ್ಪಿಸುವ
ಕರ್ತವ್ಯ ನಮ್ಮದು.

ಪಾಂಡುರಂಗ * ವಾಮನ * ಮಂಗಲಾ



# ಪರಿವಿಡಿ









8

# ಸಂಪಾದಕರ ಮನದ ಮಾತು
## (ಮೊದಲನೆಯ ಮುದ್ರಣಕ್ಕೆ)

ಶಿಶುವಿಹಾರದ ಎಳೆಯರಿಗಾಗಿ, ಪ್ರಾಥಮಿಕ ಶಾಲೆಯ ಗೆಳೆಯರಿಗಾಗಿ ಸಿದ್ಧಪಡಿಸಿದ ದ. ರಾ. ಬೇಂದ್ರೆ-ಅಂಬಿಕಾತನಯದತ್ತರ-ಕವನಗಳಿಂದ ಆಯ್ಕೆ ಮಾಡಿದ ಕವನ ಪುಷ್ಪಮಾಲೆ ಈ ಸಂಗ್ರಹ. ಈ ಮೊದಲ ಹಿಡಿಯ ಸಾಲುಗಳನ್ನು ಮಕ್ಕಳ ಮನಸ್ಸು ಹಿಡಿದರೆ, ಸಾಲುಗಳಿಗೆ ಮನ ಮಿಡಿದರೆ ನನ್ನ ಈ ಪ್ರಯತ್ನ ಸಾರ್ಥಕವಾದೀತು.

ಬೇಂದ್ರೆಯವರ ಮೂವತ್ತೂ ಕವನ ಸಂಗ್ರಹಗಳ ಹೆಸರು, ಅವುಗಳು ಪ್ರಕಟಗೊಂಡ ಅನುಕ್ರಮ ವರ್ಷ ಎಳೆಯರಿಗೆ ಸ್ಮರಣೆಯಿಂದ ಹೇಳಲು ಬರಬೇಕು. ಐವತ್ತೈದೂ ಕವನಗಳನ್ನು ಅವರು ಕುಣಿಯುತ್ತ ಹಾಡಬೇಕು.

ಇದರಿಂದ ಇಂದಿನ ಕಂದರು ನಾಳೆ ಬೆಳೆದು ದೊಡ್ಡವರಾದಂತೆ ಅವರೊಂದಿಗೆ ಬೇಂದ್ರೆ ಕಾವ್ಯಪ್ರೀತಿ ಬೆಳೆಯುತ್ತದೆ. ಬೇಂದ್ರೆ ಕಾವ್ಯಾಭ್ಯಾಸದಿಂದ ಅವರ ಮನಸ್ಸು ಅರಳುತ್ತದೆ ಹಾಗೂ ಹೊಸ ಕಾಲಕ್ಕೆ ತಕ್ಕಂತೆ ಸ್ಪಂದಿಸಲು ಸಮರ್ಥವಾಗುತ್ತದೆ ಎಂಬ ಆಶಯ ಸನ್ನದಾಗಿದೆ. ಪೂರ್ವ ಪ್ರಾಥಮಿಕ ಶಾಲಾ ಶಿಕ್ಷಕರು ಹಾಗೂ ಪ್ರಾಥಮಿಕ ಶಾಲಾ ಶಿಕ್ಷಕರು ಈ ದಿಕ್ಕಿನಲ್ಲಿ ವಿದ್ಯಾರ್ಥಿಗಳನ್ನು ಸಿದ್ಧಪಡಿಸಬೇಕಾಗಿ ಬಿನ್ನಹ.

– ವಾಮನ ಬೇಂದ್ರೆ

'ಶ್ರೀಮಾತಾ'
ಸಾಧನಕೇರಿ, ಧಾರವಾಡ-೮
ಡಿಸೆಂಬರ್ ೧೭, ೧೯೯೦



## ಪ್ರಕಾಶಕರ ನುಡಿ

### "ಕುಣಿಯೋಣು ಬಾ"

### (ಚಿಕ್ಕ ಮಕ್ಕಳಿಗಾಗಿ ಅಂಬಿಕಾತನಯದತ್ತರ ಆಯ್ದ ಕವನಗಳು)

**ಒಂದು ಒಳನೋಟ :**

"ಕುಣಿಯೋಣು ಬಾರss" ಈ ಕವನವನ್ನು ವರಕವಿ ಅಂಬಿಕಾತನಯದತ್ತರು ರಚಿಸಿದ್ದು ೧೯೩೧ರಲ್ಲಿ. ಈ ಮಾತಿಗೆ ಈಗ ೮೭ ವರುಷಗಳು. ಆದರೆ ಈ ಕವನದ ಅಮರ ಸಂದೇಶ ಅಂದಿಗೂ–ಇಂದಿಗೂ–ಎಂದಿಗೂ ಚಿರನೂತನವೇ ಆಗಿದೆ ಎಂದೇ ಹೇಳಬೇಕು. "ಕುಣಿಯೋಣು ಬಾರss, ಕುಣಿಯೋಣು ಬಾ" ಎಂಬ ಪಲ್ಲವಿಯನ್ನು ಹೊಂದಿದ ಈ ನಲ್ವಾಡಿನ ಕೆಲವೇ ನುಡಿಗಳನ್ನು ಇಲ್ಲಿ ಪ್ರಸ್ತಾಪಿಸುವೆ:

"ಆ ಕಾಗಿ
ಯಾಕಾಗಿ
ಕುಣಿಯೋದು ಬೇಕಾಗಿ
ಇಲ್ದ ಬಣ್ಣದ ಸೋಗಿ
ಕುಣಿ॥

ಹಿಗ್ಗು ಹಾಕಿತು ಕ್ಯಾಕಿ
ಇರಲಾರನೇಕಾಕಿ
ಬಾ, ಬಾರ ನನ್ನಾಕಿ॥ ಕುಣಿ

..............

..............

ತಾಳ್ಯಾಕ
ತಂತ್ಯಾಕ
ರಾಗದ ಚಿಂತ್ಯಾಕ
ಹೆಜ್ಯಾಕ ಗೆಜ್ಯಾಕ ॥ ಕುಣಿ
ಕುಲುಕಿಸಿ ಕೈಕೈ
ಮಲಕಿಸಿ ಮೈಮೈ
ಥಕ ಥಕ ಥೈ ಥೈ ॥ ಕುಣಿ

..............

..............



ಆ ಕ್ಷೀರ-
ಸಾಗರ-
ದಾನಂದದಾಗರ
ತೆರಿತೆರಿ ತೆರದರ ॥ ಕುಣಿ

ಹದಿನಾಲ್ಕು ಲೋಕಕ್ಕೆ
ಚಿಮ್ಮಲಿ ಈ ಸುಖ
ಹಿಗ್ಗಲಿ ಸಿರಿಮುಖ ॥ ಕುಣಿ

("ಗರಿ" ಕವನ ಸಂಕಲನದಿಂದ ಆಯ್ದಭಾಗ)

ಸರ್ ಜೋಸುವಾ ರೇಮಂಡ್ಸ್ ಬಹಳ ಮಾರ್ಮಿಕವಾಗಿ ಈ ಕೆಳಗಿನಂತೆ ಹೇಳಿದ್ದಾರೆ:

"All the gestures of children are graceful; the reign of distortion and unnatural attitudes commerces with the introduction of the dancing matter"

"ಮಕ್ಕಳ ಎಲ್ಲ ಹಾವ-ಭಾವಗಳೂ ಸುಂದರವಾಗಿಯೇ ಇರುತ್ತವೆ. ಆದರೆ ನೃತ್ಯ ಶಿಕ್ಷಕರ ಪ್ರವೇಶದಿಂದ ವಿಕೃತಿಯ ಆಳ್ವಿಕೆ ಹಾಗೂ ಅಸಹಜ ಪ್ರವೃತ್ತಿಗಳು ಪ್ರಾರಂಭವಾಗುತ್ತವೆ" ಎಂದು.

ಮಕ್ಕಳಲ್ಲಿಯ ನೈಜತ್ವವು ಬೆಳೆದವರಲ್ಲಿಯೂ ಮುಂದುವರಿದಾಗ, ಆ ಹಿಗ್ಗು ಕೇಕೆ ಹಾಕಿ, "ಏಕಾಕಿ"ಯಾಗಿ ಇರಲಾರದೆ "ಬಾ, ಬಾರ, ನನ್ನಾಕಿ" ಎಂದು ಆ ಹಿಗ್ಗನ್ನು ಹಂಚಿಕೊಂಡು, "ತಾಳ್ಯಾಕ, ತಂತ್ಯಾಕ, ರಾಗದ ಚಿಂತ್ಯಾಕ, ಹೆಜ್ಯಾಕ, ಗೆಜ್ಯಾಕ" ಎಂದು, "ಕುಲುಕಿಸಿ ಕೈಕೈ, ಮಲಕಿಸಿ ಮೈಮೈ, ಥಕಥಕ ಥೈಥೈ" ಎಂದು ಕುಣಿಯಲು ಮುಂದಾಗಿ "ಹದಿನಾಲ್ಕು ಲೋಕಕ್ಕೆ "ಈ ಸುಖವನ್ನು ಚಿಮ್ಮಿ, ಸಿರಿಮುಖವನ್ನು ಹಿಗ್ಗಿಸುವುದರಲ್ಲಿ ತೊಡಗುತ್ತಾನೆ. ಅಂತೆಯೇ "ಕುಣಿಯೋದು ಬೇಕಾಗಿ, "ಕುಣಿಯೋಣು ಬಾ" ಎಂಬ ಸಂದೇಶವನ್ನು ವರಕವಿ ಅಂಬಿಕಾತನಯದತ್ತರು ನೀಡಿದ್ದಾರೆ: "ಆ ಕಾಗಿ, ಯಾಕಾಗಿ, ಕುಣಿಯೋದು ಬೇಕಾಗಿ", ಕುಣಿಯೋದೇ, ಮಹಾಕವಿ ಬೇಂದ್ರೆಯವರ ಜೀವನ ಸಂದೇಶವಾಗಿದೆ. ಅಂತೆಯೇ ಡಾ॥ವಾಮನ ಬೇಂದ್ರೆಯವರು ಮಕ್ಕಳಿಗಾಗಿ ವಿಶೇಷವಾಗಿ ಸಂಪಾದಿಸಿರುವ ಈ ಕಿರು ಕವನ ಸಂಕಲನಕ್ಕೆ "ಕುಣಿಯೋಣು ಬಾ" ಎಂಬ ಶಿರೋನಾಮೆಯನ್ನು ಕೊಟ್ಟಿದ್ದಾರೆ. ಇದು ಔಚಿತ್ಯಪೂರ್ಣವಾಗಿದೆ.

ಈ ಕವನ ಸಂಕಲನದಲ್ಲಿ ೫೫ ಕವನಗಳಿವೆ. ವರಕವಿ ಡಾ॥ ದ.ರಾ. ಬೇಂದ್ರೆಯವರ ಸಮಗ್ರ ಕಾವ್ಯದಲ್ಲಿಯ ೧೪೨೭ ಕವನಗಳಲ್ಲಿ ೫೫ ಕವನಗಳನ್ನು ಆಯ್ದು, ಈ ಕವನ ಸಂಕಲನದಲ್ಲಿ ಸಂಗ್ರಹಿಸಲಾಗಿದೆ. ಅದರಲ್ಲೂ ಈ ೫೫ ಕವನಗಳ ಪೂರ್ಣ ಪಾಠವನ್ನು ಸೇರ್ಪಡೆ ಮಾಡದೆ, ಈ ಒಂದೊಂದು ಕವನದ ಒಂದು ಅಥವಾ ಎರಡು ನುಡಿಗಳನ್ನು ಅವುಗಳಿಂದ ಆಯ್ದು, ಈ ಸಂಕಲನವನ್ನು ಕ್ರೋಢೀಕರಿಸಲಾಗಿದೆ. ಅಂದರೆ, ಮಕ್ಕಳು



ಈ ಕವನಗಳನ್ನು ಕಂಠಪಾಠ ಮಾಡಿದರೆ, ಈ ಕವನಗಳಲ್ಲಿ ಅಂತರ್ಗತವಾಗಿರುವ ಸಂದೇಶವು, ಈ ಮಕ್ಕಳ ಮನದಾಳದಲ್ಲಿ ಇಳಿದು, ಅವರು ಬೆಳೆದಂತೆ ಈ ಸಿದ್ಧಾಂತಗಳೂ ಕೂಡ ಅವರಲ್ಲಿ ಬೆಳೆದು, ಅವರೆಲ್ಲರೂ ಸಮಮಾನವೀಯತೆಯ ಬುನಾದಿಯ ನವ ಸಮಾಜ ನಿರ್ಮಾಣದ ಯೋಧರಾಗಬೇಕು ಎಂಬ ಉದ್ದೇಶ ಈ ಕವನ ಸಂಗ್ರಹದ್ದಾಗಿದೆ. ಈ ಕಾರಣಕ್ಕೆ ಈ ಕವನ ಸಂಗ್ರಹದಲ್ಲಿ ಸೇರ್ಪಡೆಯಾಗಿರುವ ಕವನಗಳ ಅಂತರಾರ್ಥವನ್ನು - ಅವುಗಳ ಸಂದೇಶವನ್ನು ಒಂದೆಡೆ ಶಿಕ್ಷಕರು ಹಾಗೂ ಇನ್ನೊಂದೆಡೆ ಪಾಲಕರು ಅಧ್ಯಯನ ಮಾಡಿ, ಈ ಕವನಗಳ ಅಂತರ್ಯವನ್ನು ಮಕ್ಕಳಿಗೆ ಮನದಟ್ಟು ಮಾಡಿಕೊಡುವ ಮಹತ್ವದ ಕರ್ತವ್ಯವನ್ನು ನೆರವೇರಿಸಬೇಕಾಗಿದೆ. ಈ ಸಂದರ್ಭದಲ್ಲಿ ಸುಪ್ರಸಿದ್ಧ ಆಂಗ್ಲಕವಿ ವಿಲಿಯಮ್ ವರ್ಡ್ಸ್‌ವರ್ತ್ ಹೇಳಿದ ಮಾತನ್ನು ಮರೆಯುವಂತಿಲ್ಲ. ಅದೆಂದರೆ:

"The child is the father of man".

"ಮಗುವು ಮನುಷ್ಯನ ತಂದೆ" ಎಂಬುದು ಸಾರ್ವತ್ರಿಕ ಸತ್ಯ. ಆದಕಾರಣ ನಾವು ಇಂದಿನ ಮಗುವನ್ನು ಯೋಗ್ಯ ಮಾರ್ಗದಲ್ಲಿ ಬೆಳೆಸಿ, ತರಬೇತಿ ಕೊಟ್ಟರೆ, ನಾಳಿನ ಮನುಷ್ಯನು ಯೋಗ್ಯವಾಗಿ ರೂಪುಗೊಳ್ಳಬಲ್ಲ ಎಂಬ ಮಾರ್ಗದರ್ಶಕ ಸೂತ್ರದಂತೆ, ಮಕ್ಕಳನ್ನು ಭವ್ಯ ಭವಿಷ್ಯತ್ತಿಗಾಗಿ ತಯಾರು ಮಾಡಲು "ಕುಣಿಯೋಣು ಬಾ" ಕವನ ಸಂಗ್ರಹವು ಒಂದು ಉಪಯುಕ್ತ ಉಪಕರಣವಾಗುತ್ತದೆ ಎಂಬುದನ್ನು ಮರೆಯುವ ಹಾಗಿಲ್ಲ. ವರಕವಿಗಳೇ ಹೇಳಿಲ್ಲವೇ, "ಮಕ್ಕಳು ಮನೆಯ ಮಾಣಿಕ್ಯ" ಎಂದು. ಅಂತೆಯೇ ಈ ಮಾಣಿಕ್ಯಗಳನ್ನು ನಾವು ಜೋಪಾನವಾಗಿ ಕಾಯ್ದರೆ, ಆಗ ಮನೆಗಳನ್ನು ಇವರು ಬೆಳಗಬಲ್ಲವರಾಗುತ್ತಾರೆ.

ಬ್ಯಾರಿನ್ ಲಿಟ್ಟನ್ ಮಕ್ಕಳ ಬಗ್ಗೆ ಬಹಳ ಮಹತ್ವದ ಮಾತೊಂದನ್ನು ಹೇಳಿದ್ದಾರೆ. ಅದು ಹೀಗಿದೆ:

**"Childhood and genius have the samo master organ in common ' inquisitiveness. Let childhood have its way, and as it began where genius begins, it may find what genius finds"**

ಇದರ ಸಾರಾಂಶವೆಂದರೆ–

"ಬಾಲ್ಯ ಹಾಗೂ ಪ್ರತಿಭೆ ಇವುಗಳಿಗೆ ಒಂದೇ ಪರಿಷ್ಕ–ಅವಯವವು ಇರುತ್ತದೆ. ಅದೆಂದರೆ ಸಾಮಾನ್ಯ ಅನ್ವೇಷಣಶೀಲತೆ. ಬಾಲ್ಯವು ತನ್ನದೇ ಆದ ಮಾರ್ಗದಲ್ಲಿ ಮುನ್ನಡೆಯಲಿ; ಅದು ಪ್ರತಿಭೆ ಪ್ರಾರಂಭವಾದಲ್ಲೇ ಪ್ರಾರಂಭವಾಗಿದ್ದುದರಿಂದ, ಅದು ಪ್ರತಿಭೆ ಯಾವ ಗುರಿಯನ್ನು ಮುಟ್ಟುತ್ತದೆಯೋ ಅಲ್ಲಿಗೇ ಮುಟ್ಟುತ್ತದೆ".



ಈ ನುಡಿಯು ಅತ್ಯಂತ ಮಾರ್ಮಿಕವಾದುದಾಗಿದೆ. ಬಾಲ್ಯ ಹಾಗೂ ಪ್ರತಿಭೆಗಳ ಮೂಲ ಒಂದೇ ಆದಾಗ, ಬಾಲ್ಯವನ್ನು ಎಷ್ಟೊಂದು ಕಾಳಜಿಯಿಂದ ರೂಪಿಸುತ್ತೇವೋ, ಅಷ್ಟೇ ಪ್ರಖರವಾಗಿ ಆ ಮಗುವು ತನ್ನ ಪ್ರತಿಭೆಯನ್ನು ಉಜ್ವಲವಾಗಿ ಬೆಳೆಸಿಕೊಳ್ಳಲು ಸಾಧ್ಯವಾಗುತ್ತದೆ. ಈ ದೃಷ್ಟಿಯಿಂದಲೂ ವರಕವಿ ಅಂಬಿಕಾತನಯದತ್ತರ "ಕುಣಿಯೋಣು ಬಾ" ಕವನ ಸಂಕಲನವು ಮಕ್ಕಳ ಭವಿತವ್ಯವನ್ನು ರೂಪಿಸುವ ಅತ್ಯಂತ ಮಹತ್ವದ ಉಪಕರಣ ಎಂದು ಸಿದ್ಧವಾಗುತ್ತದೆ. ಈ ಹಿನ್ನೆಲೆಯಲ್ಲಿ ಸುಪ್ರಸಿದ್ಧ ಆಂಗ್ಲಕವಿ ಜಾನ್ ಮಿಲ್ಟನ್ ಹೇಳಿದ ಈ ಕೆಳಗಿನ ಮಾತು ಮಹತ್ವವನ್ನು ಹೊಂದುತ್ತದೆ. ಅದೆಂದರೆ:

**"Childhood shows the man as morning shows the day".**

ಅಂದರೆ– "ಮುಂಜಾವು ದಿನವನ್ನು ಸೂಚಿಸುವ ಹಾಗೆ. ಬಾಲ್ಯವು ಮನುಷ್ಯನನ್ನು ಸೂಚಿಸುತ್ತದೆ".

ಇಷ್ಟೊಂದು ಮಹತ್ವವುಳ್ಳ ಬಾಲ್ಯವನ್ನು ರೂಪಿಸಬಲ್ಲ ವರಕವಿ ಅಂಬಿಕಾತನಯದತ್ತರ ಕವನ ಸಂಕಲನ – "ಕುಣಿಯೋಣು ಬಾ" – ಇದರಲ್ಲಿಯ ಕವನಗಳಲ್ಲಿಯ ಕೆಲವುಗಳ ಮಹತ್ವವನ್ನಾದರೂ ಇಲ್ಲಿ ಪರಿಚಯಿಸುವ ಕಾರ್ಯವನ್ನು "ಒಳನೋಟ" ಎಂಬ ಶೀರ್ಷಿಕೆಯಲ್ಲಿ ಒಳಮೂಡಿಸಲಾಗಿದೆ.

ಈ ಕವನ ಸಂಕಲನದಲ್ಲಿ ೫೫ ಕವನಗಳಿವೆ. ೫೫ ಬಹಳ ಮಹತ್ವದ ಸಂಖ್ಯೆ. ಏಕೆಂದರೆ, ೫+೫=೧೦; ಇದು ಪೂರ್ಣತೆಯ ಸಂಕೇತ. ಇದು "ನಮಸ್ಕಾರ ಮುದ್ರೆ"ಯೂ ಕೂಡ. ಎರಡೂ ಕೈಗಳ ಹಸ್ತಗಳನ್ನು ಜೋಡಿಸಿ ನಾವು ನಮಸ್ಕಾರವನ್ನು ಮಾಡುತ್ತೇವೆ. ಹತ್ತು ಬೆರಳುಗಳನ್ನು ಜೋಡಿಸುತ್ತೇವೆ. ಇವುಗಳನ್ನು ಬಲಗೈ ಹಸ್ತದ ಹೆಬ್ಬೆಟ್ಟನ್ನು "ಒಂದು" ಎಂದು ಹಿಡಿದು. ಆ ಹಸ್ತದ "ಐದು" ಅಂಕಿಗಳನ್ನು ಎಣಿಸಿ, ನಂತರ ಎಡಗೈಯ ಕಿರು ಬೆರಳನ್ನು "ಆರು" ಎಂದು ಲೆಕ್ಕ ಹಿಡಿದು, ಅಲ್ಲಿಂದ ಎಡಗೈಯ ಹೆಬ್ಬೆಟ್ಟಿನವರೆಗೆ "ಹತ್ತು" ಎಣಿಸಬೇಕು. ನಂತರ ಬಲಗೈಯ ಹೆಬ್ಬೆಟ್ಟು ಹಾಗೂ ಎಡಗೈಯ ಹೆಬ್ಬೆಟ್ಟಿನ ಅಂಕಿಗಳನ್ನು ಕೂಡಿಸಿದರೆ, ಅದು "ಹನ್ನೊಂದು" ಆಗುತ್ತದೆ. ಹಾಗೆಯೇ ಬಲಗೈ ಹಾಗೂ ಎಡಗೈಗಳ ಒಂದೊಂದು ಬೆರಳಿನ ಅಂಕಿಗಳನ್ನು ಕೂಡುತ್ತಾ ಹೋದರೆ, ೧+೧೦=೧೧, ೨+೯=೧೧, ೩+೮=೧೧, ೪+೭=೧೧, ೫+೬=೧೧ ಎಂದು ಬೇರೀಸ್ ಬರುತ್ತದೆ.

ಈ ಎರಡೂ ಕೈಗಳ ಎಲ್ಲಾ ಬೆರಳುಗಳ ಬೇರೀಸ್ ಕೂಡಿಸಿದರೆ, ೧೧+೧೧+೧೧+೧೧+೧೧=೫೫ ಆಗುತ್ತದೆ. ಇದನ್ನು ಕೂಡಿಸಿದರೆ, ೫+೫=೧೦ ಆಗುತ್ತದೆ. ಇದು ನಮಸ್ಕಾರ ಮುದ್ರೆಯ ಮಹತ್ವ ಹಾಗೂ ಔಚಿತ್ಯ. ಅಂತೆಯೇ ೫೫ ಕವನಗಳನ್ನು ಒಳಗೊಂಡಿರುವ "ಕುಣಿಯೋಣು ಬಾ" ಕವನ ಸಂಕಲನವು ಈ ದೃಷ್ಟಿಯಿಂದಲೂ ವಿಶೇಷತೆಯನ್ನು ಹೊಂದಿದೆ. ಪೂರ್ಣತೆಯ ಅಂತಃದೃಷ್ಟಿಯನ್ನು ನೀಡುತ್ತದೆ.



ಈ ಕವನ ಸಂಕಲನವು "ಪ್ರಾರ್ಥನೆ"ಯು ಕವನದಿಂದ ಪ್ರಾರಂಭವಾಗಿ "ಶಾಂತಿ ಮಂತ್ರ"ದೊಡನೆ ಮುಕ್ತಾಯವಾಗುತ್ತದೆ. ಮಹಾಕವಿ ಬೇಂದ್ರೆಯವರ "ಪ್ರಾರ್ಥನೆ" ಅತ್ಯಂತ ವಿಶಿಷ್ಟವಾದ ಸಂದೇಶವನ್ನು ಸಾರುತ್ತದೆ. ಅದು ಲೇಸನ್ನು ಬಯಸುವ ಸಂದೇಶ. ಕಿವಿಗೆ ಲೇಸೆ ಕೇಳಿಸಬೇಕು. ನಾಲಿಗೆ ಲೇಸನ್ನೇ ನುಡಿಯುತ್ತಿರಬೇಕು. ಕಣ್ಣುಗಳಿಗೆ ಲೇಸೆ ಕಾಣಿಸುತ್ತಿರಬೇಕು. ಅಷ್ಟೇಅಲ್ಲ, ಕೈಗಳಿಂದ ಲೇಸೆ ಆಗುತ್ತಿರಬೇಕು. ಕಾಲ್ಗಳಿಂದ ಲೇಸೆ ನಡೆದು ಬರಬೇಕು. ಹಾಗೂ ಲೇಸನ್ನೇ ಉಂಡು, ಲೇಸನ್ನೇ ಉಸಿರಿ, ಲೇಸೇ ಮೈಯ ಪಡೆದು ಇರಬೇಕು. ಎಂಥ ಮಹಾನ್ ಸಂದೇಶ! ದೇಹದ ಅಂಗಾಂಗಗಳೂ ಲೇಸನ್ನೇ ಮಾಡುತ್ತಾ ಇದ್ದಾಗ, ಲೇಸೆ ಪ್ರತಿಯೊಬ್ಬರಲ್ಲಿ ಮೈದಾಳುತ್ತದೆ. ಈ ಸಂದೇಶದಿಂದ ಪ್ರಾರಂಭವಾಗುವ ಈ ಕವನ ಸಂಕಲನದ ಕೊನೆಯ ಕವನ- "ಶಾಂತಿ ಮಂತ್ರ"ದ ಅಂತಃದರ್ಶನವನ್ನು ಪಡೆಯೋಣ. ಈ ಕವನದ ಸಂದೇಶವು ಈ ರೀತಿಯಾಗಿದೆ: "ಕೂಡಿ ಓದಿ, ಕೂಡಿ ಆಡಿ, ಕೂಡಿ ಅರಿತು, ಕೂಡಿ ತಿಳಿದು, ಕೂಡಿ ಉಂಡು, ಕೂಡಿ ಕುಡಿದು, ಕೂಡಿ ಕೂಡಿ ದುಡಿದು, ಕೂಡಿ ನಡೆದು, ಒಳಗೂಡಿ ಪಡೆದು, ಕೂಡಿಯೇ ನುಡಿ ಹೇಳಿ, ಅದನ್ನು ಕೇಳಿ, ಕೂಡಿ ಬೆಳೆದು, ಬೆಳಗೋಣ ದೇವರೊಲು ಕೂಡಿ, ಕೂಡಿ, ಕೂಡಿ" ಇದು ಈ ಶಾಂತಿ ಮಂತ್ರದ ಸಂದೇಶ. ಈ ಶಾಂತಿ ಮಂತ್ರವು, "ಸಹನಾವವತು, ಸಹನೌಭುನಕ್ತು, ಸಹವೀರ್ಯಂ ಕರವಾವಹೈ"ದ ಸಂದೇಶದ ಸಾರವಾಗಿದ್ದು, ಇದರ ಅಂತಿಮ ಆಶಯವಾದ "ತೇಜಸ್ವಿನಾಮಧಿ ತಮಸ್ತು, ಮಾವಿದ್ವಿಷಾವಹೈ" - ಅಂದರೆ "ಕತ್ತಲೆಯಿಂದ ಬೆಳಕಿನೆಡೆಗೆ, ಅಸೂಯೆ ಇಲ್ಲದ ಕಡೆಗೆ" ಇದು ನಮ್ಮನ್ನು ಒಯ್ಯುವ ಗುರಿಯನ್ನು ಹೊಂದಿದೆ. ಅಂದರೆ, ವರಕವಿಗಳು ಈ ಎರಡೂ ಕವನಗಳ ಮೂಲಕ, ಮನುಷ್ಯನನ್ನು ಕತ್ತಲೆಯಿಂದ ಬೆಳಕಿನೆಡೆಗೆ ಕೊಂಡೊಯ್ದು, ಅಸೂಯೆ ಇಲ್ಲದ, ನವ ಮಾನವೀಯತೆಯನ್ನು ಆಧರಿಸಿದ "ನವ ಮಾನವ ಸಮಾಜ"ದ ಆವಿರ್ಭಾವದ ಸಂದೇಶವನ್ನು ಬಿಂಬಿಸುತ್ತಾರೆ.

ಈ ಕವನ ಸಂಕಲನದಲ್ಲಿಯ ಇನ್ನು ಕೆಲವೇ ಕವನಗಳ ಮಹತ್ವವನ್ನು ವಿವರಿಸಿ, ಈ "ಒಳನೋಟ"ಕ್ಕೆ ಮಂಗಳ ಹಾಡುವೆ.

ಮಕ್ಕಳಿಗೆ ಮಹಾಕವಿ ಬೇಂದ್ರೆಯವರು "ಬೆಳಗು ಜಾವ" ಕವನದಲ್ಲಿ ನೀಡಿರುವ ಕರೆಯನ್ನು ಗಮನಿಸೋಣ:

"ಏಳು ಚಿನ್ನ! ಬೆಳಗಾಯ್ತು ಅಣ್ಣ
ಮೂಡಲವು ತೆರೆಯ ಕಣ್ಣ"

ಎಂದು ಪ್ರಾರಂಭವಾಗಿ-

"ಮಕ್ಕಳಿರ ಕೇಳಿ, ರಸ ಕುಡಿಯಲೇಳಿ
ಹುಸಿನಿದ್ದೆ ಗಿದ್ದೆ ಸಾಕು;
ಈ ತುಂಬಿಬಾಳು ತುಂಬಿರುವ ತನಕ
ತುಂತುಂಬಿ ಕುಡಿಯಬೇಕು"



ಎಂದು ನುಡಿಯುವುದರ ಮೂಲಕ, ಸೂರ್ಯೋದಯವಾಗುತ್ತಿದ್ದಂತೆ, ಮಕ್ಕಳು ಹುಸಿ ನಿದ್ದೆಯನ್ನು ತೊರೆದು, ಎದ್ದು ರಸಾಸ್ವಾದನೆಗೆ ಸಿದ್ಧರಾಗಿ,

"ತುಂಬಿ ಬಾಳು ತುಂಬಿರುವ ತನಕ
ತುಂತುಂಬಿ ಕುಡಿಯಬೇಕು"

ಎಂಬ ಕರೆ ನೀಡುತ್ತಾರೆ. ಇನ್ನು "ವಚನಗಳು" ಕವನದಲ್ಲಿಯ ಸಂದೇಶವನ್ನು ಗಮನಿಸೋಣ–

"ಒಲವಿನಲ್ಲಿ ಬೆಳಿ,
ಒಲವಿನಲ್ಲಿ ಉಳಿ
ಒಲವೆ ಬಾಳ ಚೆಲುವು"

ಬೇಂದ್ರೆಯವರ ಜೀವನ ಸಂದೇಶವು "ಒಲವೆ ನಮ್ಮ ಬದುಕು" ಎನ್ನುವುದಾಗಿದೆ. ಅದಕ್ಕೇ ಅವರು ಒಲವಿನಲ್ಲಿ ಬೆಳೆದು, ಒಲವಿನಲ್ಲಿ ಉಳಿದು, ಒಲವಿನ ಬಾಳನ್ನು ಬಾಳಿದಾಗ, ಅದು ಚೆಲುವನ್ನು ತರುತ್ತದೆ ಎಂದು ನುಡಿಯುತ್ತಾರೆ. ಮಕ್ಕಳಲ್ಲಿ ಈ ಒಲವಿನ ಬೀಜವನ್ನು ಬಿತ್ತಿದರೆ, ಆಗ ಅವರು ಒಲವಿನೊಡನೆ ಬಾಳುವುದನ್ನು ಕಲಿಯುತ್ತಾರೆ.

"ಕನ್ನಡ ಕವನ – ವಸಂತ ಪಲ್ಲವಿ" ಈ ಕವನದ ಸಂದೇಶವನ್ನು ನೋಡೋಣ–

"ಮಾನವಾತ್ಮನ ಪಾವನ ಮಾಡುವ
ಕವನವಾಗದೇ ಕನ್ನಡವು?"

ಎಂದು ಕೇಳುವ ವರಕವಿಗಳು–

"ನಮೋ ವಿಶ್ವಭಾರತಿ
ಸದ್ಭಾವದ ಸನ್ಮತಿ
ಇದು ವಸಂತ ಪಲ್ಲವಾ
ಹಾಡಿಕೊಳಲಿ ಬಲ್ಲವಾ"

ಎಂದು ಈ ಕವನವನ್ನು ಮುಕ್ತಾಯಗೊಳಿಸುತ್ತಾರೆ. ವರಕವಿಗಳ ದೃಷ್ಟಿಯಲ್ಲಿ ಕನ್ನಡ ಕವನಗಳು ಮಾನವಾತ್ಮವನ್ನು ಪಾವನ ಮಾಡಬೇಕು. ಅಷ್ಟೇಅಲ್ಲ "ಕನ್ನಡವು, - ಭಾರತವು, ಜಗವೆಲ್ಲವು ಒಂದೇ" ಎಂದು ಹಾಡುವುದರೊಡನೆ, "ಜಗದೇಳಿಗೆಯಾಗುವದಿದೆ ಕರ್ನಾಟಕದಿಂದೆ" ಎಂಬ ಭವಿಷ್ಯವನ್ನು ಕೂಡ ಮಹಾಕವಿ ಬೇಂದ್ರೆ ನುಡಿದಿದ್ದಾರೆ.

ಇದಲ್ಲದೆ "ಈ ಕನ್ನಡಾ" ಕವನದಲ್ಲಿ–

"ಕಿವುಡಾಗಿ ನುಡಿಯುವುದು
ಕುರುಡಾಗಿ ನಡೆಯುವುದು
ಮೊರೆಯೋ ಬೇಡೆನ್ನುವುದು ಈ ಕನ್ನಡಾ–



ಬಾಯ್ಮುಚ್ಚಿ ಬದುಕುವುದು
ಕಾಲ್ಕಟ್ಟಿ ಕೂಡುವುದು
ಯಾವ ಬಾಳು? ಎಂಬುದ ಈ ಕನ್ನಡಾ"

ಎಂಥ ಮಹಾನ್ ಸಂದೇಶ! ಈ ಕರ್ತವ್ಯ ಕನ್ನಡದ್ದಾದಾಗ. ಕನ್ನಡಿಗರು ಯಾವ ಸಂದೇಶವನ್ನು ಹೊತ್ತು ಬಾಳಬೇಕು ಎನ್ನುವುದನ್ನು ಮಹಾಕವಿಗಳು ನುಡಿಯುವುದರ ಮೂಲಕ ಕನ್ನಡ. ಕನ್ನಡಿಗರಲ್ಲಿ ಜಾಗತಿಕ ಹೊಣೆಗಾರಿಕೆಯ ಪ್ರಜ್ಞೆಯನ್ನು ಮೂಡಿಸುತ್ತಾರೆ.

"ಭಾರತ ಅಂಬೋ ಹೆಸರು
ಹೆಸರಾಗಬೇಕು.
ಅದೂ ಕಡ್ಡಿ ಕಸಾ ಅಲ್ಲ"

ಎಂದು "ಏಳೇಳು" ಕವನದಲ್ಲಿ ನುಡಿದಿರುವುದು, ಭಾರತೀಯರಲ್ಲಿ ಕರ್ತವ್ಯ ಪ್ರಜ್ಞೆಯನ್ನು ಮೂಡಿಸುವಂತಿದೆ.

ಮಹಾಕವಿ ಬೇಂದ್ರೆಯವರ "ಶುಭೇಚ್ಛೆ–ಸ್ವಸ್ತಿವಾಚನ" ಕವನದೊಂದಿಗೆ ಈ "ಒಳನೋಟ"ಕ್ಕೆ ಮುಕ್ತಾಯ ಹೇಳುವೆ–

"ಎಲ್ಲರಿಗೂ ಒಳ್ಳೇದಾಗಲಿ
ಸ್ವಸ್ತಿ! ಶುಭವಾಗಲಿ, ನಮಗೂ ನಿಮಗೂ.

ಉಳ್ಳವರು, ಒಳ್ಳೆಯವರು ಒಂದಾಗಿ
ಬಡವರ ಕಷ್ಟ ತಪ್ಪಲಿ.
ಮನಿವಂತಿಗೆ ಒಳ್ಳೇದಾಗಲಿ
ನಾಲಿಗೇನು, ತಿರುವಿದ್ಹಾಂಗ ಹೊಳ್ಳತದ
ಮನಸ್ಸು ಒಳ್ಳೇದಾಗಲಿ,
ಮಾತು ಒಳ್ಳೇದಾಗಲಿ,
ಕೃತಿ ಒಳ್ಳೆದಾಗಲಿ".

ಮಕ್ಕಳಲ್ಲಿ ಮಹಾಕವಿ ಅಂಬಿಕಾತನಯದತ್ತರ ಈ ಸಂದೇಶಗಳು ಬೇರೂರಿದಾಗ, ನಿಸ್ಸಂದೇಹವಾಗಿ ನವ ಮಾನವೀಯತೆಯ ಆಧಾರದ ನವ ಸಮಾಜದ ಆವಿರ್ಭಾವ ಆಗುವುದರಲ್ಲಿ ಯಾವ ಸಂದೇಹವೂ. ಇರಲಾರದು.

"ರಸವೆ ಜನನ, ವಿರಸ ಮರಣ, ಸಮರಸವೇ ಜೀವನ" – ಇದೂ ಕೂಡ ಮಹಾಕವಿ ಬೇಂದ್ರೆಯವರ ಅಮರ ಸಂದೇಶ.

ಹುಬ್ಬಳ್ಳಿ
೨ನೇ ಜನೇವರಿ ೨೦೧೮
(ದಿ॥ ಸುಪುತ್ತಮ್ಮನವರ ೧೯ನೇ ವಾರ್ಷಿಕ ಸಂಸ್ಮರಣೆಯ ದಿನ)

ಡಾ॥ ಕೆ. ಎಸ್. ಶರ್ಮಾ
ನಿರ್ದೇಶಕರು,
ವರಕವಿ ಡಾ॥ ದ. ರಾ. ಬೇಂದ್ರೆ
ಸಂಶೋಧನ ಸಂಸ್ಥೆ ಹಾಗೂ ಬೇಂದ್ರೆ ಸಂಗೀತ ಅಕ್ಯಾಡೆಮಿ.



# ೧. ಪ್ರಾರ್ಥನೆ

೧

ಲೇಸೆ ಕೇಳಿಸಲಿ, ಕಿವಿಗೆ
ನಾಲಿಗೆಗೆ ಲೇಸೆ ನುಡಿದು ಬರಲಿ,
ಲೇಸೆ ಕಾಣಿಸಲಿ ಕಣ್ಗೆ
ಜಗದೊಳಗೆ ಲೇಸೆ ಹಬ್ಬುತಿರಲಿ.

೨

ಲೇಸೆ ಕೈಗಳಿಂದಾಗುತಿರಲಿ,
ತಾ ಬರಲಿ ಲೇಸೆ ನಡೆದು
ಲೇಸನುಂಡು, ಲೇಸುಸಿರಿ,
ಇಲ್ಲಿರಲಿ ಲೇಸೆ ಮೈಯ್ಯ ಪಡೆದು.





'ಕುಣಿಯೋಣು ಬಾ' – ಲೇ : ಡಾ॥ ದ. ರಾ. ಬೇಂದ್ರೆ (ಅಂಬಿಕಾತನಯದತ್ತ)

## ೨. ಕುಣಿಯೋಣು ಬಾರಽ

ಕುಲಿಕಿಸಿ ಕೈ ಕೈ
ಮಲಕಿಸಿ ಮೈ ಮೈ
ಥಕ ಥಕ ಥೈ ಥೈ
ಕುಣಿಯೋಣು ಬಾರಽ
ಕುಣಿಯೋಣು ಬಾ.

ಚಕ ಚಕ ಚಂಚಲ
ಮಿಂಚಿನ ಗೊಂಚಲ
ಚಕಮಕಿ ಚಲಮಲ
ಕುಣಿಯೋಣು ಬಾರಽ
ಕುಣಿಯೋಣು ಬಾ.

ಗರಿ ಗರಿ ಗಿರಿ ಗಿರಿ
ಹಿಗ್ಗಿಗ್ಗಿ ಹಿರಿ ಹಿರಿ
ಸೈ ಸೈ ಸರಿಸರಿ
ಕುಣಿಯೋಣು ಬಾರಽ
ಕುಣಿಯೋಣು ಬಾರಽ
ಕುಣಿಯೋಣು ಬಾ.

ಹದಿನಾಲ್ಕು ಲೋಕಕ್ಕ
ಚಿಮ್ಮಲಿ ಈ ಸುಖ
ಹಿಗ್ಗಲಿ ಸಿರಿ ಮುಖ
ಕುಣಿಯೋಣು ಬಾರಽ
ಕುಣಿಯೋಣು ಬಾ.







೨ 'ಕುಣಿಯೋಣು ಬಾ' (ಅಂಬಿಕಾತನಯದತ್ತರ ಆಯ್ದ ಕವನಗಳ ಸಂಕಲನ) – ಸಂ. : ಡಾ॥ ವಾಮನ ಬೇಂದ್ರೆ

## ೩. ಸೌಂದರ್ಯ

ಸೌಂದರ್ಯವೆಂಬ
ಕಟುವಿಷವೆ, ಪೀಯೂಷವೆ
ಸೌಂದರ್ಯವೆಂಬ
ಮೃತಗರ್ಭ ಬೇವೆ, ಮಾವೆ
ಸೌಂದರ್ಯವೆಂಬ ರತ್ನವ
ಹೆಡೆಯೊಳಿಟ್ಟ ಹಾವೆ
ಸುರವಂದ್ಯ ಆವೇ !

○



## ೪. ಬೆಳಗು

ಮೂಡಲ ಮನೆಯಾ
ಮುತ್ತಿನ ನೀರಿನ
ಎರಕವ ಹೊಯ್ದಾ
ನುಣ್ಣನ್ನೆರಕವ ಹೊಯ್ದಾs
ಬಾಗಿಲ ತೆರೆದೂ
ಬೆಳಕು ಹರಿದೂ
ಜಗವೆಲ್ಲಾ ತೊಯ್ದಾ
ಹೋಯ್ತೋ ಜಗವೆಲ್ಲಾ ತೊಯ್ದಾ.

○







## ೫. ಶಕ್ತಿ

ನಿನ್ನ ನಾಲಿಗೆಯನ್ನು
ತನ್ನ ಮಂಚವ ಮಾಡಿ
ಎನ್ನ ತುಟಿಗಳ
ತನ್ನ ತಲೆಗಿಂಬು ಮಾಡಿ
ತನ್ನ ಪದಗಳ
ನಿನ್ನ ಕಂಠ ದೇಶದಲಿಟ್ಟು
ಚೆನ್ನ ಸರಸತಿ ನಿತ್ಯ
ಪವಡಿಸುವಳಾಡಿ



## ೬. ಕರಿಮರಿ ನಾಯಿ

ಕರಿಮರಿನಾಯಿ । ಕುಂಯಿಗುಡುತಿತ್ತು
ಭಟ್ಟರಬಾಯಿ । ಒಟಗುಡುತಿತ್ತು.
ಸರಭರ ಮಳೆಯು
ಸುರಿಯುತಲಿತ್ತು
ಕಾಲುವೆ ನೀರದು
ಹರಿಯುತಲಿತ್ತು
ಭೋರನೆ ಗಾಳಿಯು
ಬೀಸುತಲಿತ್ತು
ತಬ್ಬಲಿ ಕುನ್ನಿಯು
ಈಸುತಲಿತ್ತು.







## ೭. ಹಕ್ಕಿ ಹಾರುತಿದೆ ನೋಡಿದಿರಾ



ಕರಿ ನರೆ ಬಣ್ಣದ ಪುಚ್ಚಗಳುಂಟು
ಬಿಳಿ-ಹೊಳೆ ಬಣ್ಣದ ಗರಿ-ಗರಿಯುಂಟು
ಕೆನ್ನನ ಹೊನ್ನನ-ಬಣ್ಣ ಬಣ್ಣಗಳ
ರೆಕ್ಕೆಗಳೆರಡೂ ಪಕ್ಕದಲುಂಟು
ಹಕ್ಕಿ ಹಾರುತಿದೆ ನೋಡಿದಿರಾ ?



## ೮ ಪಾತರಗಿತ್ತಿ ಪಕ್ಕಾ



ಪಾತರಗಿತ್ತಿ ಪಕ್ಕಾ
ನೋಡೀದೇನs ಅಕ್ಕಾ !
ಹಸಿರು ಹಚ್ಚಿ ಚುಚ್ಚಿ
ಮೇಲsಕರಿಸಿಣ ಹಚ್ಚಿ.
ಏನು ಬಣ್ಣ ಬಣ್ಣ
ನಡುವೆ ನವಿಲಗಣ್ಣ !
ತಾಳ ಚವ್ವ ಚಕ್ಕ
ಕುಣಿತ ತಕ್ಕ ತಕ್ಕ
ಇನ್ನು ಎಲ್ಲಿಗೋಟ
ನಂದನದ ತೋಟ.





## ೯ ಯುಗಾದಿ

ಯುಗ ಯುಗಾದಿ ಕಳೆದರೂ
ಯುಗಾದಿ ಮರಳಿ ಬರುತಿದೆ
ಹೊಸವರುಷಕೆ ಹೊಸ ಹರುಷವ
ಹೊಸತು ಹೊಸತು ತರುತಿದೆ.

○



## ೧೦. ನಿಗಿ ನಿಗಿ ಮುಗಿಲು

ನಿಗಿ ನಿಗಿ ಮುಗಿಲು
ನಿಗಿ ನಿಗಿ ಹಗಲು
ಕೆಂಡವ ಕಾರುವದು ;
ಮೈ ತೊರೆದೆತ್ತಲು
ಪ್ರಾಣವು ಬತ್ತಲು
ನೆತ್ತಿಲಿ ಹಾರುವದು.

ಕಾಲೂರಿತು ಮಳೆ
ಕತ್ತೆತ್ತಿತು ಬೆಳೆ
ಹನಿಯೊಡೆಯಿತು ಮೋಡ ;
ಕಿಲಿಕಿಲಿ ಹಕ್ಕಿ
ಕುಲುಕುಲು ನಕ್ಕಿ
ದಯೆಗರೆಯಿತು ನೋಡಾ !

○



## ೧೧. ಅಚಿಂತ್ಯ

ನಿಜವ ಕಂಡವರಿಲ್ಲ
ನಿಜ ಕಾಣುವಂತಿಲ್ಲ
ನಿಜವೇನು ಮಳಲ ಹುಡಿಗಿಂತ ಕೀಳೇ ?
ನಿಜವ ಕಂಡಿಹೆನೆಂಬ
ಕಣ್ಣ ಜಂಭದ ಹುಂಬ !
ಮಳಲಹುಡಿ ಗುಟ್ಟೇನು ಕಣ್ಣ ಕೂಳೇ ?



## ೧೨. ಬರಿಗೊಡದ ಬಾಲಿ

ಪಿಸಿ ಪಿಸಿ ನಕ್ಕು
ಹುಸಿ ಹುಸಿ ನಾಚಿ
ಹುಡದಿಯ ಬಿಟ್ಟು
ದಿನವೇಸ ಕೋಲ.
ಆಟದ ಗೊಂಬಿ
ಮಗಳೆಂದು ನಂಬಿ
ಮಗ್ಗುಲದಾಗ
ಮಲಗೀಸಿ ಕೋಲ.







## ೧೩. ಮಾಯಾಕಿನ್ನರಿ



ಮರುಳು ಮಾಡಾಕ ಹೋಗಿ
ಮರುಳಸಿದ್ಧನನಾರಿ
ಮರುಳಾಕಗ್ಯಾಳ ಜಂಗಮಯ್ಯಗ ॥

ಕಿನ್ನರಿ ಆಗ್ಯಾಳ ಕೈಯ್ಯಾಗ
ನುಡಿದಾಳ ಬಂದ್ಹಾಂಗ ಮೈಯ್ಯಾಗ
ಜುಮ್ ಜುಮು, ರುಮುಜುಮು
ಗುಂಗುಣು ದುಮು ದುಮು
ನಾದದ ನದಿಯೊಂದು ನಡೆದ್ಹಾಂಗ
ಗಲ್ಲಗಲ್ಲಕೆ ಹಚ್ಚಿ, ನಲ್ಲೆನಲ್ಲೆಯರಿರುಳು
ಗುಜು ಗುಜು ಗುಲು ಗುಲು ನುಡಿದ್ಹಾಂಗ

○

## ೧೪. ಅಕ್ಕರತಿ-ನೀರಾಟ

ಚಿಕ್ಕಮರಿಗೆ
ತನ್ನ ರೆಕ್ಕಿ ಬೀಸಣಿಕೀಲೆ
ಅಕ್ಕ ಜಳಕಕ್ಕ ಹಾಕ್ಯದ
ನೋಡಪ್ಪಾ, ಹಕ್ಕಿಜಾತ್ಯಾನ ಅಕ್ಕರತಿ
ಗಳಗಳ ಗಾಳಿಯು
ಜಳಜಳ ನೀರಾಗ
ಸುಳಿಸುಳಿದು ಬಂದು
ನೀರಾಟವು.

○



## ೧೫. ಯಾರಿಗೂ ಹೇಳೋಣು ಬ್ಯಾಡಾ

ಯಾರಿಗೂ ಹೇಳೋಣು ಬ್ಯಾಡಾ,
ಯಾರಿಗೂ........... ॥ ಪಲ್ಲವಿ॥

ಮಲ್ಲಿಗೀ ಮಂಟsಪದಾಗ
ಗಲ್ಲಗಲ್ಲ ಹಚ್ಚಿ ಕೂತು
ಮೆಲ್ಲದನಿಲೆ ಹಾಡೋಣಂತ
ಯಾರಿಗೂ...........

ಹಾವಿನಾ ಮರಿಯಾಗಿ ಅಲ್ಲಿ
ನಾವೂನೂ ಹೆಡಿಯಾಡಿಸೋಣು
ಹೂವೆ ಹೂವು ! ಹಸಿರೆ ಹಸಿರು !
ಯಾರಿಗೂ...........

O

## ೧೬. ಗುರುದೇವಾ

ನುಡಿದು ಬೇಸತ್ತಾಗ
ದುಡಿದುಡಿದು ಸತ್ತಾಗ
ಜನಕ ಹಿಂಗ್ಗಿನ ಹಾಡು
ನೀಡಾಂವಾ !
ನಿನ್ಹ್ಯಾಂಗ ಆಡಾಕ
ನಿನ್ಹ್ಯಾಂಗ ಹಾಡಾಕ
ಪಡೆದು ಬಂದವ ಬೇಕೊ
ಗುರುದೇವಾ !

O





## ೧೭. ಪೋರಿ ಪೋರ

ಪೋರಿ ನೀನು, ನಾನು ಪೋರಾ
ಮಾರಿ ಕಣ್ಣಿಗೆ ಮರುಳರಾಗಿ
ನೆಚ್ಚಿ ಮೆಚ್ಚಿ ಕೂಡಿದ್ದೇವಽ
ಬೇರೆ ಇಲ್ಲಾ
ಇದ್ದರೆ ಶಿವನೆ ಬಲ್ಲಾ.

ಯಾಕಽ ? ಏನು ? ಎಲ್ಲಿಗಂತಽ
ನಾಕು ಮಾತು ಕೂಡಾ ನಾವು
ಒಬ್ಬರಿಗೊಬ್ಬರು ಆಗಽ
ಕೇಳಲಿಲ್ಲಾ
ಉತ್ತರಾ ಹೇಳಲಿಲ್ಲಾ.

○



## ೧೮. ಮಳೆ

ಮಳೆ ಬರುವ ಕಾಲಕ್ಕ
ಒಳಗ್ಯಾಕ ಕೂತೇವ್ರೊ
ಇಳೆಯೊಳಗ ಜಳಕ ಮಾಡೋಣಾ
ನಾವ್ನೀನೂ, ಮೋಡಗಳ ಆಟ
ನೋಡೋಣಾ.

ಕೋಲ್ಮಿಂಚು ಇಣಿ ಇಣಿಕಿ
ಕಣ್ಣೆಣಿಸಿ ಕೆಣಕೆಣಕಿ
ಬಾ, ಗೆಳೆಯ ಹೊರಗ ಎನುವಾಗ
ಒಳಸೇರಿಬರಿಮೀರಿದ್ಹಾಂಗ ಕುಳಿತೇವ್ರೊ.

○





## ೧೯. ತಡಸಲು

ತಡಸಲು ತಡಸಲು ಅಗೊ ಅಲ್ಲಿ
ದಡದಡ ಎನುವುದು ಎದೆ ಇಲ್ಲಿ
ದಿಡುಗಡೊ ಗುಡುಗುಡು ಗುಡುಗುತಿದೆ
ಗಿಡ, ಮರ, ಜನ, ಮನ ನಡುಗುತಿದೆ.

ಮುತ್ತಿನ ಸರಗಳು ಹರಿಯುತಿವೆ
ಗಾಜುಗಂಬಗಳು ಸುರಿಯುತಿವೆ
ಕಾಮನಬಿಲ್ ಮಣಿದಾಡುತಿವೆ
ನೀರಿನ ಹೂ ಕುಣಿದಾಡುತಿವೆ !

○

## ೨೦. ಮೇಘದೂತ-ಪೀಠಿಕೆ

ಇರಲಿ ಬೆಟ್ಟ ನದಿ
ಇರಲಿ ಶಿವನು ಸತಿ
ಇರಲಿ ಕಾಡು ನಾಡು
ಇರಲಿ ಕಾಮ ರತಿ
ಅಜನು-ಇಂದುಮತಿ
ಬರಲಿ ಸಾವು ಕೇಡು.

ಯಕ್ಷ-ಯಕ್ಷಿ
ಇರಲಕ್ಷಿ-ಪಕ್ಷಿ
ಕಣ್ಗಂಡ ಪಾತ್ರದಿಂದ
ಪ್ರೇಮದಾಟವನು
ಕವಿಯು ಆಡಿಸಿದ
ಕಾಮಸೂತ್ರದಿಂದ.

○



## ೨೧. ಎರಡು ನಕ್ಷತ್ರ

ಕುಲು ಕುಲು ನಗುತಿಹ
ಕೂಸಿನ ಹಾಗೆ
ಲುಕುಲುಕು ಹೊಳೆವುದುಚುಕ್ಕೆ !

ಇಳೆಗೆ ಬರುವುದೋ ?
ಬಾನಿಗೆ ಕರೆವುದೋ ?
ಎಲ್ಲಿಗೋ ! ಏತಕ್ಕೆ ?

○

## ೨೨. ಶ್ರಾವಣ

ಬೆಟ್ಟ ತೊಟ್ಟಾವ ಕುತನಿಯ ಅಂಗಿ
ಹಸಿರು ನೋಡ ತಂಗಿ
ಹೊರಟಾವೆಲ್ಲೊ ಜಂಗಿ-
ಜಾತ್ರಿಗೇನೋ ?
ನೆರದsದ ಇಲ್ಲೆ ತಾನೋ !



ಬನ ಬನ ನೋಡು ಈಗ ಹ್ಯಾಂಗ
ಮದುವಿ ಮಗನ್ಹಾಂಗ
ತಲಿಗೆ ಬಾಸಿಂಗ
ಕಟ್ಟಿಕೊಂಡೊ ?
ನಿಂತಾವ ಹರ್ಷಗೊಂಡು.

○



೧೨ 'ಕುಣಿಯೋಣು ಬಾ' (ಅಂಬಿಕಾತನಯದತ್ತರ ಆಯ್ದ ಕವನಗಳ ಸಂಕಲನ) – ಸಂ. : ಡಾ॥ ವಾಮನ ಬೇಂದ್ರೆ

## ೨೩. ಮಂಗಳಾ

ನಗೂ ನಗೂ ಹಾಗೆ ನಗು
ಆಡು ಮಗಳೆ ಮಂಗಳಾ
ತುಂಬಲಿ ಮನೆ, ಸುರಿಯಲಿ ಸೊನೆ
ಸೂಸುತಿರಲಿ ಅಂಗಳಾ.

ರತ್ನಧವಳ ಮುತ್ತು ಹವಳ
ಹಾಗೆಯೆ ಹುಸಿ ನಕ್ಕರೆ
ತುಟಿಯಲೇನು–ಜೊಲ್ಲು, ಜೇನು ?
ನಿನ್ನ ಬೆಲ್ಲ ಸಕ್ಕರೆ !

○

## ೨೪. ಪಡುವಲ ಕಡಲ ಅಂಬಿಗರ ಹಾಡು

ಲೇಲಾಲಿ ಲೇಸೋ। ಲೇಲಾಲಿ ಲೋ



ಕಡಲೀನ ನಡಿಗೆಗೆ
ಹಾಡುವೆನೋ
ತೆರೆಗಳ ಲೀಲೆಯ
ನೋಡುವೆನೋ
ಗಾಳಿಯ ಛಂದಕ
ತೂಗುವೆನೋ
ಮುಂದಕೆ ಮುಂದಕೆ
ನೂಗುವೆನೋ

ಏ। ಲೇಲಾಲಿ...............

○



## ೨೫. ಕರಡಿ ಕುಣಿತ

ಕಪ್ಪಿನಾ ಕೈಕಡಗ, ಕುಣಿಕೋಲು, ಕೂದಲು
ಕಂಬಳಿ ಹೊದ್ದಾಂವ ಬಂದಾನ
ಗುಣುಗುಣುಗುಟ್ಟುತ ಕಡಗವ ಕುಟ್ಟುತ
ಕರಡಿಯನಾಡಿಸುತ ನಿಂದಾನ.

'ಕುಣಿಯಲೆ ಮಗನೆ ನೀ' ಅನ್ನೋದೊಂದೇ ತಡ
ತನ್ನಽಽನ ತಾನಽನ ತಂದಾಽನ
ಮುದ್ದುಕೂಸಿನ ಹಾಗೆ
ಮುಸುಮುಸು ಮಾಡುತ್ತ
ಕುಣಿದಾನ ಕುಣಿತಽವ ಛಂದಾನ !







## ೨೬. ಚಳಿ ಇರಲಿ ಮಳೆ ಬರಲಿ

ಚಳಿ ಇರಲಿ ಮಳೆ ಬರಲಿ
ಮಂಜು ಸುರಿಯುತಲಿರಲಿ
ಬಿಸಿಲು ಕುದಿಯುತಲಿರಲಿ
ಮುಮ್ಮುಖದ ಋತುಮಾನ ಹೇಗು ಇರಲಿಽ
ನಗುತ ಒಲಿವೆವು ನಾವು
ನಗುತ ಒಲಿಸುವೆವುಽಽಽ

ಏನೆ ಕಷ್ಟವು ಬರಲಿ, ಎಂಥ ನಷ್ಟವೆ ಇರಲಿ
ಇಷ್ಟವು ಅನಿಷ್ಟವೂ ಕೂಡಿಬರಲಿಽಽ
ದುಮ್ಮಾನ ಕಳೆವಂತೆ ಸುಮ್ಮಾನ ಹೊಳೆವಂತೆ
ಹಾಡಿ ನಲಿವೆವು ನಾವು
ಹಾಡಿ ನಲಿಸುವೆವುಽಽಽ



## ೨೭. ಬೆಳಗು ಜಾವ

ಏಳು ಚಿನ್ನ! ಬೆಳಗಾಯ್ತು ಅಣ್ಣ
ಮೂಡಲವು ತೆರೆಯ ಕಣ್ಣ
ನಕ್ಷತ್ರಜಾರಿ, ತಮವೆಲ್ಲ ಸೋರಿ
ಮಿಗಿಲಹುದು ಬಾನ ಬಣ್ಣ!

ಮಕ್ಕಳಿರ ಕೇಳಿ, ರಸಕುಡಿಯಲೇಳಿ
ಹುಸಿನಿದ್ದೆಗಿದ್ದೆ ಸಾಕು;
ಈ ತುಂಬಿಬಾಳು ತುಂಬಿರುವ ತನಕ
ತುಂತುಂಬಿ ಕುಡಿಯಬೇಕು.





## ೨೮. ಆಟ

ತಿನುವೆ ಎಂದು ಅನ್ನ ಬಂತು
ನಾನೆ ಅದನು ತಿಂದೆ
ಸತ್ತೆ ಎಂದು ಪ್ರಾಣ ಚೀರೆ
ಮತ್ತೆ ಹುಟ್ಟಿ ಬಂದೆ.

ನಾನು ನೀನು ಅವನು ಅವಳು
ಅದುವು ಇದುವು ಎಂದು
ತಿಳಿಯದಾಡುತ್ತಿತ್ತು ತಿಳಿವು
ಮುಚ್ಚಿ ಒಂದನೊಂದು.



## ೨೯. ಶ್ರೀ ಅರವಿಂದರಿಗೆ

ನಿನ್ನಾ ಹುಬ್ಬಿನ ಇಬ್ಬದಿ
ಗರಿ ಚಾಚಿದೆ ಗರುಡ!
ಬಾನ್ಗಣ್ಣಾಗಿಹೆ ನೀ, ನಾ
ಗುರಿಯಿಲ್ಲದ ಕುರುಡ.

ಕೊಡು ತಂದೆ, ಇನ್ನೊಂದೇ
ಒಂದೇ ಬಾಯ್ಗುಟುಕು
ಕೊಡು ತಾಯೆ, ಇನ್ನೊಮ್ಮೆ
ಒಮ್ಮೆ ಎದೆಗುಟುಕು.









## ೩೦. ಶ್ರೀ ಮಾತೃಶ್ರೀಗೆ

ನಿನ್ನ ನೋಟವೆ ಸಾಲು
ತಾಯಿ ನೀನು
ಕಂಗಳಿಂದಲೆ ಕುಡಿವೆ
ಕೂಸು ನಾನು.

ಕಂಗಳಿಂದಲೆ ನುಡಿವೆ
ತಾಯಿ ನೀನು.
ನನ್ನ ಕಣ್ಣೇ ಕಿವಿಯು
ಕವಿಯು ನಾನು.



## ೩೧. ವಚನಗಳು

ದೇಹದಲ್ಲಿ ಸೌಂದರ್ಯವಿರಲಿ
ಆರೋಗ್ಯ ಪ್ರಾಣದಲ್ಲಿ
ಮನಸಿನಲ್ಲಿ ಉತ್ಥಾನವಿರಲಿ
ಆನಂದ ಜೀವನಲ್ಲಿ !

ಒಲವಿನಲ್ಲಿ ಬೆಳಿ
ಒಲವಿನಲ್ಲಿ ಉಳಿ
ಒಲವೆ ಬಾಳ ಚೆಲುವು !







## ೩೨. ಚಿಟ್ಟಗುಬ್ಬಿ ಚಿಂವು ಚಿಂವು

ಚಿಟ್ಟಗುಬ್ಬಿ ಚಿಂವು ಚಿಂವು ॥ ಪಲ್ಲವಿ ॥

ಅದೇ ಬೆಳಗು, ಅದೇ ಗಾಳಿ ॥
ಕೂಗುವುದೂ ಅದೇ ಕೋಳಿ
ಅದರ ನವ ಮುದವ ತಾಳಿ
ಏನ ಹಾರುವೆ ? ಏನ ಕೋರುವೆ ?
ಚಿಟ್ಟಗುಬ್ಬಿ ಚಿಂವು ಚಿಂವು ॥

ಎಲ್ಲ ಗುಬ್ಬಿ ಒಂದೆ ಮಾಟ
ಅದೇ ಆಟ ಅದೇ ಪಾಟ
ಬೇರೆ ಸೊಗಸು ಬೇರೆ ನೋಟ
ಆದರೂ ಇದೆ ! ಇರಲಿ ಯಾವುದೆ
ಚಿಟ್ಟಗುಬ್ಬಿ ಚಿಂವು ಚಿಂವು

೦



## ೩೩. ಚಂದ್ರ

ಬಿದಿಗಿ ಚಂದ್ರ ಬಂದ ನೋಡು
ದೀಪಹಚ್ಚಿದಂತೆ ಜೋಡು
ಯಾರ ಮನೆಯು ಅಲ್ಲಿ ಇಹುದೋ
ಯಾರು ಬಲ್ಲರು ?
ನೋಡಲೇನು ? ಒಬ್ಬರೇನು
ಹೇಳಲೊಲ್ಲರು.

ಬಂದನು ಹುಣ್ಣಿವೆಯ ಚಂದ್ರ
ಬೆಳದಿಂಗಳು ನಿಬಿಡ ಸಾಂದ್ರ
ಅಲ್ಲ ಅಲ್ಲ ಮುಗಿಲು ತುಂಬ
ಇಹುದು ಮಜ್ಜಿಗೆ !
ಬೆಣ್ಣೆಮುದ್ದೆ ಮೇಲೆಯೊಂದು
ಹೇಳು ಅಜ್ಜಿಗೆ.

○



## ೩೪. ದ್ವಾಸಿ ಜೋಡಿ ಖಾರದ ರಾಡೀ

ದ್ವಾಸಿ ಜೋಡಿ
ಖಾರದ ರಾಡೀ
ತುಸಾ ಉಳಸದ
ಹಸಾ ಮಾಡಿ
ಮೀಸಿ ಮಾತ್ರ
ಒರಸಿಕೊಂಡು
ಹೊರಗ ಬರಬೇಕು.
ಇಲ್ಲದಿದ್ರ ಹುಚ್ಚ ಅಂತ
ತಿರುಗತಿರಬೇಕು.

○



## ೩೫. ಮಾತು



ಕಿವಿಮಾತು ಸವಿಮಾತು
ಕೂಡಿ ಆಡಿದ ಮಾತು
ನೋಡಿ ಆಡಿದ ಮಾತು
ಕಂಡ ಮಾತು.

ತುಂಬಿ ಆಡಿದ ಮಾತು
ನಂಬಿ ಆಡಿದ ಮಾತು
ಕತ್ತಲನು ಬೆಳಗಿಸುವ
ಬೆಳಗು ಮಾತು !



## ೩೬. ಮಲೆನಾಡ ಸೆರಗು

ಏನು ಅಂದವ್ವೋ ! ಆಹಹ ! ಏನಿತು ಚೆಂದವ್ವೊ !
ಬಟ್ಟಬಯಲು ಅತ್ತ ಇತ್ತ
ಹಸಿರು ಹುಲ್ಲು ಮೊತ್ತ ಮೊತ್ತ
ಪಚ್ಚೆ ಪಯಿರು ಸುತ್ತಮುತ್ತ
ಏನು ಅಂದವ್ವೋ ! ಆಹಹ ! ಏನಿತು ಚೆಂದವ್ವೋ !



ಮಾವು ಮಲ್ಲಿಗೆಗಳ ಬೀಡು
ಇಲ್ಲಿ ಹಾಡದಿದ್ದ ಹಾಡು–
ಇದುವೆ ಮೀಸಲಿಟ್ಟ ನಾಡು !
ಏನು ಅಂದವ್ವೋ ! ಆಹಹ ! ಏನಿತು ಚೆಂದವ್ವೋ !





## ೩೭. ಅವ್ವನ ಸೀರಿ

ಅವ್ವನ ಸೀರಿ
ಮಡಿಚಲಾರೆ !
ಅಪ್ಪನ ರೊಕ್ಕ
ಎಣಿಸಲಾರೆ !
ಎಂಥ ಪ್ರಕಾಶಾ ?
ತುಂಬಿತಾಕಾಶಾ !

○



## ೩೮. ಮುದುಕಿ

ನಾಡ ಸಂರಕ್ಷಣೆ ತೋಫು ಇರದಿರಲು
ನಾಡಿಗೊಂದಿರಬೇಕು ಬಯ್ಯುವಾ ಮುದುಕಿ ;

ಊರ ಸಂರಕ್ಷಣೆಗೆ ನಾಯಿ ಇರದಿರಲು
ಊರಿಗೊಂದಿರಬೇಕು ಬಾಯ್ಬಡಕ ಮುದುಕಿ ;

ಕೇರಿಯನ್ನೆಚ್ಚರಿಸೆ ಗಂಟೆಯಿರದಿರಲು
ಕೇರಿಗೊಂದಿರಬೇಕು ಕೆಮ್ಮುವಾ ಮುದುಕಿ ;

ಮನೆ ಮನೆಗೆ–ಫ್ಲೇಗಾಗಿ–ದೀಪವಿರದಿರಲು
ಮನೆಗೊಂದು ಇರಬೇಕು ಸಾಯದಾ ಮುದುಕಿ !

○



## ೩೯. ಗಣಪತಿರಾಯಾ

ಜಯದೇವಾ ಜಯದೇವಾ ಶ್ರೀ ಗಣಪತಿರಾಯಾ
ಭಯಕಾರಕ, ಭಯ ಹಾರಕ, ಓಂಕಾರಕಾಯಾ.



ಮೋದಕ ತುಂಬಿದ ಬಸಿರಲೆ
ನಡೆಸಿರುವೆಯೋ ನೃತ್ಯ ?
ಬೋಧಕ ದೃಷ್ಟಿಯು
ಬರೆವುದು ಮೌನದ ಸಾಹಿತ್ಯ.

ಶೋಧಕ ದೃಷ್ಟಿಯು
ಸೃಷ್ಟಿಯು ನಿನ್ನದೆ ಶತಕೃತ್ಯ
ನಾದದ ಮೂಲ ಸ್ವರೂಪವೆ
ನಾ ನಿನ್ನಯ ಭೃತ್ಯ.

○

## ೪೦. ಕನ್ನಡ ಕವನ–ವಸಂತ ಪಲ್ಲವಿ

ಮಾನವಸಾತ್ತ್ವ ಪಾವನ ಮಾಡುವ
ಕವನವಾಗದೇ ಕನ್ನಡವು ?
ಯಾವನ ಭಾವನೆ ಏನಿದೆ ಏನೋ
ಅವನಿಗೆ ಅವನದು ಇದೆ ತೊಡವು.

ನಮೋ ವಿಶ್ವಭಾರತಿ
ಸದ್ಭಾವದ ಸನ್ಮತಿ
ಇದು ವಸಂತ ಪಲ್ಲವಾ
ಹಾಡಿ ಕೊಳಲಿ ಬಲ್ಲವಾ

○



## ೪೧. ಯೋಚನೆ-ಯೋಜನೆ

ಮತ್ತೆ ಯೋಚನೆ
ಮತ್ತೆ ಯೋಜನೆ
ಸಂಕಲ್ಪಿತ ಕಾರ್ಯಗಳನು
ಕೈಗೂಡಿಸಿಕೊಳುವವರೆಗು
ಮತ್ತೆ ಯೋಚನೆ, ಮತ್ತೆ ಯೋಜನೆ.

ನಿನ್ನ ಮನೆಗೆ ಒಡೆಯನಾಗಿ
ನೆರೆಯನಾಡ ತುಳಿಯನಾಗಿ
ಒಡನಾಡಿಯ ಗೆಳೆಯನಾಗಿ
ಸುತ್ತುತ್ತಿರು ಭೂಮಿಯ
ಸೇವೆಮಾಡು ಸ್ವಾಮಿಯ
ಮತ್ತೆ ಯೋಚನೆ, ಮತ್ತೆ ಯೋಜನೆ.

ಮೇಲಿನಿಂದ ಮಳೆಯುಬೇಕು
ಕೆಳಗಿನಿಂದ ಬೆಳೆಯುಬೇಕು.
ಸಣ್ಣಮನಕೆ ದೊಡ್ಡ ಕೆಲಸ
ನೀಗದಣ್ಣ ನೀಗದು
ಮತ್ತೆ ಯೋಚನೆ, ಮತ್ತೆ ಯೋಜನೆ.





## ೪೨. ಚೈತನ್ಯದ ಪೂಜೆ

ಚೈತನ್ಯದ ಪೂಜೆ ನಡೆದsದ
ನೋಡs ತಂಗಿ। ಅಭಂಗದ ಭಂಗೀs ॥ ಪಲ್ಲವಿ ॥

ಸೌಜನ್ಯ ಎಂಬುದು ಮೊದಲನೆ ಹೂವು
ಅರಳೋಣು ನಾವೂ ನೀವೂ
ಸಾಮರ್ಥ್ಯ ಎಂಬುದು ಬೆಲಪತ್ರಿ
ಶಿವಗ ಅರ್ಪಿತ ಇರಲಿ ಖಾತ್ರಿ.



ಸತ್ಯ ಎಂಬುವ ನಿತ್ಯದ ದೀಪ
ಸುತ್ತೆಲ್ಲ ಅವನದೇ ರೂಪ
ಪ್ರೀತಿ ಎಂಬುವ ನೈವೇದ್ಯ
ಇದು ಎಲ್ಲರ ಹೃದಯದ ಸಂವೇದ್ಯ.

○

## ೪೩. ಕಲ್ಲರಳು

ಕಲ್ಲರಳಿ ಹೂವಾಗಿ । ಕಮ್ಮಣ್ಣ ಮನೆ ತೊಳಗಿ
ನಮ್ಮ ನಿಮ್ಮನ್ನ ಬೆರಮಾಡಿ, ಮನ ಮನ
ಕಮ್ಮಗಿರಿಸ್ಯಾವ, ಕಲ್ಲರಳಿ.

ಬೀಸಿದರ ಕಾಳರಳಿ । ಕಾಸಿದರ ಅನ್ನರಳಿ
ನುರಿಸಿ ನುರಿಸಿದರ ಕವಳರಳಿ, ಎದಿಯರಳಿ
ಹಾಲು ತೊರೆದಾವ, ಮಗುವರಳಿ.

○



## ೪೪. ಈ ಕನ್ನಡಾ

ಕೇಳಿ ನುಡಿಯುವದುಂಟು ಈ ಕನ್ನಡಾ
ಕಂಡು ನಡೆಯುವದುಂಟು ಈ ಕನ್ನಡಾ ;

ಕಿವುಡಾಗಿ ನುಡಿಯುವುದು
ಕುರುಡಾಗಿ ನಡೆಯುವುದು
ಮೊರೆಯೋ ಬೇಡೆನ್ನುವದು ಈ ಕನ್ನಡಾ.

ಬಾಯ್ಮುಚ್ಚಿ ಬದುಕುವುದು
ಕಾಲ್ಕಟ್ಟಿ ಕೂಡುವುದು
ಯಾವ ಬಾಳು ? ಎಂಬುದು ಈ ಕನ್ನಡಾ.

○

## ೪೫. ಸೂರ್ಯ

ಏಳು ಗಡೀ, ಏಳು ಹಡೀ
ಅಗ್ಗಿ ತೆರೆದ ಕಣ್ಣು
ನೈವೇದ್ಯವ ಮಾಡು ಎಡೀ
ಹೂವು, ಕಾಯಿ, ಹಣ್ಣು.

ಎದ್ದನಣ್ಣ ನಿದ್ದೆ ಹೋದ
ನಮ್ಮ ಮುದ್ದಿನವನು !
ಏಳಬೇಕು, ಹತ್ತಬೇಕು
ಮೂರು ಹೆಜ್ಜೆ ಸವನು.

○





## ೪೬. ವಾಸನಿ



ಎಷ್ಟು ಮರಾ, ಅಷ್ಟು ಥರಾ
ಬೀಜದಾಗ ಅಡಗಿದ್ದು
ಬಯಲಿಗೆ ಬಂದs ಬರ್ತsದ
ಅದೇ ಅದೇ ಅದೇ ಅಂದ್ರೂ
ಬೇರೆ ಇದ್ದೇ ಇರ್ತsದ.

ಹೂವಿನೊಳಗ ಇರೋ ವಾಸನಿ
ನೋವಿನೊಳಗೂ ಒಮ್ಮೊಮ್ಮೆ ತೋರ್ತsದ
ಹಿಡಿತಕ್ಕ ಸಿಗದs ಹಾರ್ತsದ
ಯಾವುದೋ ಬಯಲಾಗ.

○

## ೪೭. ಮೂವತ್ತು



ಶಬ್ದವೇ ಪ್ರಭುವಾಗಿ
ಅರ್ಥ ದಿಕ್ಪಾಲು.
ಸ್ವಭಾವವೇ ಮೇಲು
ಸ್ವಧರ್ಮಕ್ಕೆ.

○



# ೩೮. ಬಾಲ್ಯಕಾಂಡ

ಸರಿಮನೆ ಸರಿಬಡಿಗೆ ಯಾವುದಾದರೂ ಸರಿಯೆ
ನಾ ಸರಿ ನೀ ಸರಿ ಏರಾಟವು
ಕುಂಟ್ಹಲಪಿ ಚೆಲ್ಲಾಡಿ, ಕುಂಟೆ ಬಿಂದಕೆ ಕುಂಟೆ
ಆನೆಕಿರ್‍ರಿಗೆ ಬೆನ್ನ ಹಾರಾಟವು.

ಚಾವಂಗ, ಹುಲಿಹಳ್ಳು ಎಲ್ಲೂ ಆಡಲು ಬಹುದು
ಇಬ್ಬರಿದ್ದರು ಸಾಕು ಸರಸಾಟಕೆ
ಸಾಕ್ಷಿ ಪ್ರೇಕ್ಷಕಬೇಕು ಲೀಲಾ ವಿನೋದಕೆ
ನ್ಯಾಯದ ಚಾವಡಿಯ ಹೊರ ನೋಟಕೆ.

ಚಿಣಿಫಣಿ, ಚೆಂಡಾಟ, ಅನ್ನೇರಂಟೇಮಾಟ
ಕಾಲ್ಕೆದರಿ ಕಾಡುವ ಮೊಂಡಾಟವು
ಹಾಗೂ ಹೀಗೂ ಉಂಟು, ಆಟಕ್ಕೆ ಕಟ್ಟಳೆ
ಮುರಿವಗೆ ಎಲ್ಲವೂ ಚಿನ್ನಾಟವು.







## ೪೮. ಗಣಿತನಾ

ಗಿಣೀ ಹಣೀಮ್ಯಾಲೆ ಗಣಿತನಾ ಬರದಾನ ॥ ಪಲ್ಲವಿ ॥

ಬನಾ ಬನಾ, ಮನೀ ಮನೀ
ಥರಾ ಥರಾ, ಧನಿ ಧನಿ

ರೆಕ್ಕೀ ನೋಡಿಕೊಂಡು
ತುಕ್ಕಿ ಕೂಡತಾವ
ಹಕ್ಕೀಲೆ ಅಕ್ಕಪಕ್ಕ ಸನಿ.

ಫಕ್ಕನೆ ಹಾರತಾವ
ಗಕ್ಕನೆ ಇಳಿತಾವ
ಸಿಕ್ಕಲ್ಲೆ ಕಳೀತಾವ ದಿನಾ
ನೋಡೇನಿ ಈ ಮಂದೀನಾ !





## ೫೦. ಮಾತೃ ವಂದನ

ಜೈ ಭೂಮಾತೇ, ಜೈ ಭಾರತಮಾತೇ
ಆ ಮಾತೇ ಈ ಮಾತೇ
ಸಕಲ ಧೈರ್ಯದಾತೇ.

ಕೂಡಿ ನಡೆ, ಕೂಡಿ ನುಡಿ
ಮೂಡಿಸು ನೀ ನಮ್ಮಲಿ
ಅದೇ ಸ್ವಂತ ಅದೇ ಪಂಥ
ಅದೇ ಬಾಳಿನ ಬೆಲಿ.



## ೫೧. ಏಳೇಳು

ಏಳು ಏರಿ
ನಿದ್ದೆ ತೊರಿ
ಇನ್ ನಾಗಶಯನ ಸಾಕು.



ಸರ್ವಜ್ಞ ಹುಟ್ಟ ಅಲ್ಲಾ
ಶರೀಫ ಹದ್ದ ಅಲ್ಲಾ
ಅಲ್ಲಾಗ ಎಚ್ಚರೈತಿ
ಸಬ್ಬ ಜನರು ಏನೂ
ಗಾಂಧಿ ಟೊಪ್ಪಿಗಿ ಹಾಕಬೇಕಾಗಿಲ್ಲಾ
ಭಾರತ ಅಂಬೋ ಹೆಸರು
ಹೆಸರಾಗಬೇಕು.
ಅದೂ ಕಡ್ಡೀಕಣಾ ಅಲ್ಲಾ.





# ೫೨. ಒಲವಿಗೊಲವು

ನಮ್ಮೂಟ ಎಲ್ಲಿ ? ನೀರಡಿಸಿದಲ್ಲಿ
ಕರುಗಳಿಗೆ ಆಟ ಬೇಕು
ಹೊತ್ತು ನೆತ್ತಿಗಿದೆ. ಮತ್ತೆ ಬೇರೆಡೆಗೆ
ಹೋಗುವುದು ಏಕೆ ? ಸಾಕು.

ಕೈಯಲ್ಲಿ ಉಂಡು, ಎಲೆಯಲ್ಲಿ ಉಂಡು
ನೆಲದಲ್ಲಿ ಉಂಡು ನೆಲವು
ಬರಿದಾಯ್ತು ಬುತ್ತಿ, ಹಿರಿದಾಯ್ತು ಹಿಗ್ಗು
ಕೂಡಿತ್ತು ಒಲವಿಗೊಲವು.

ಇದು ಎಲ್ಲ ಚೆಲುವು ! ಎಲ್ಲೆಲ್ಲು ಗೆಲವು !
ನಗೆ ಸೂಸಿ ಸೂಸಿ ಹರಿದು
ಹರಿಯಿದ್ದ ಅಲ್ಲಿ ಹರಿದೀತು ಏನು ?
ಸಂಪೂರ್ಣವಲ್ಲ ಬರಿದು.

○





## ೪೩. ಸುಭೇಚ್ಛೆ–ಸ್ವಸ್ತಿ ವಾಚನ

ಎಲ್ಲರಿಗೂ ಒಳ್ಳೇದಾಗಲಿ
ಸ್ವಸ್ತಿ! ಶುಭ ಆಗಲಿ, ನಮಗೂ ನಿಮಗೂ

ಉಳ್ಳವರು, ಒಳ್ಳೆಯವರು ಒಂದಾಗಿ
ಬಡವರ ಕಷ್ಟ ತಪ್ಪಲಿ.
ಮನಿವಂತಿಗೆ ಒಳ್ಳೇದಾಗಲಿ
ನಾಲಿಗೇನು, ತಿರುವಿದ್ಹಾಂಗ ಹೊಳ್ಳತಽದ
ಮನಸ್ಸು ಒಳ್ಳೇದಾಗಲಿ,
ಮಾತು ಒಳ್ಳೇದಾಗಲಿ,
ಕೃತಿ ಒಳ್ಳೇದಾಗಲಿ.

○

## ೪೪. ಕವಿಯ ಬಟ್ಟೆ

ಕವಿಯ ಬಟ್ಟೆ–ಕಾವೀ ಬಟ್ಟೆ
ಅದನು ತೊಟ್ಟೆ ಎಂದಿಗೂ
ಬಿಚ್ಚಿ ಬಿಟ್ಟೆ ದಾನ ಕೊಟ್ಟೆ
ಮುಗಿಲನೆಲ್ಲ ಮಂದಿಗೂ

ವಿರಹದಲ್ಲೆ ಮಿಲನವೆನಿಸಿ
ಸಂಧಿ ಸಂಧಿ ಸಂಧಿಗೂ
ಚರ್ಮ ಸುಲಿದ ಮರ್ಮಗಳಲಿ
ಯಜ್ಞ ಸಂದಿಗೊಂದಿಗೂ.

○





## ೪೪. ಶಾಂತಿ ಮಂತ್ರ

ಕೂಡಿ ಓದಿ ಕೂಡಾಡಿ ಕೂಡಿ
ಅರಿಯೋಣು ಕೂಡಿ ಕೂಡಿ.

ಕೂಡಿ ತಿಂದು ಕೂಡುಂಡು ಕುಡಿದು
ದುಡಿಯೋಣ ಕೂಡಿ ಕೂಡಿ

ಕೂಡಿ ನಡೆದು ಒಡಗೂಡಿ ಪಡೆದು
ನುಡಿ ಹೇಳಿ ಕೇಳಿ ಕೂಡಿ.

ಕೂಡಿ ಬೆಳೆದು ಬೆಳಗೋಣ
ದೇವರೊಲು ಕೂಡಿ ಕೂಡಿ ಕೂಡಿ.





೩.೨ 'ಕುಣಿಯೋಣು ಬಾ' (ಅಂಬಿಕಾತನಯದತ್ತರ ಆಯ್ದ ಕವನಗಳ ಸಂಕಲನ) – ಸಂ. : ದಾ॥ ವಾಮನ ಬೇಂದ್ರೆ





## ಜನನ-ವಿವಾಹ

೩೧-೧-೧೮೯೬ : ಮಾಘವದ್ಯ ಪ್ರತಿಪದಾ-ಗುರುಪ್ರತಿಪದಾ, ಮನ್ಮಥನಾಮ ಸಂವತ್ಸರ-ಧಾರವಾಡ, ಪೋತನೀಸ ಓಣಿಯಲ್ಲಿ ಜನನ.

೧೮೯೯ : ನೀರಕುತ್ತು ದಾಟಿತು. ಜೇಷ್ಠವೋ ಶ್ರಾವಣವೋ ಇರಬೇಕು. ಹಾಲಗೇರಿ ಕೆರೆಯಲ್ಲಿ ಬಿದ್ದು ಜೀವಂತ ಪಾರಾದದ್ದು.

೧೯೦೮ : ತಂದೆ-ರಾಮಚಂದ್ರ ತೀರಿಕೊಂಡರು.

೧೯೦೨-೧೯೧೩ : ಧಾರವಾಡದಲ್ಲಿ ಪ್ರಾಥಮಿಕ ಶಿಕ್ಷಣದಿಂದ ಮ್ಯಾಟ್ರಿಕ್ ಪಾಸಾಗುವವರೆಗೆ.

೧೯೧೩ : ಅಜ್ಜಿ-ತಾಯಿಯ ತಾಯಿ. ಗೋದುಬಾಯಿ ತೀರಿಕೊಂಡರು.

೧೯೧೪ : ಪುಣೆಯ ಫರ್ಗ್ಯುಸನ್ ಕಾಲೇಜು ಸೇರಿದ್ದು.

೧೯೧೬-೧೮ : ವಿವಿಧ ಛಂದಸ್ಸುಗಳಲ್ಲಿ, ಕನ್ನಡ, ಮರಾಠಿ, ಇಂಗ್ಲೀಷ್ ಹಾಗೂ ಸಂಸ್ಕೃತದಲ್ಲಿ ಕವಿತಾ ರಚನೆ ಹಾಗೂ ಶ್ರೇಷ್ಠ ಕವಿಗಳ ಕವನಗಳ ಅನುವಾದ.

೧೯೧೮ : ಬಿ. ಎ. ಪದವಿ. ಜೂನ್ ೪ರಂದು. ಧಾರವಾಡದ ವಿಕ್ಟೋರಿಯಾ ಹೈಸ್ಕೂಲಿನಲ್ಲಿ ಶಿಕ್ಷಕ. (ಈಗಿನ ವಿದ್ಯಾರಣ್ಯ ಹೈಸ್ಕೂಲು)

೧೯೧೯ : ಲಕ್ಷ್ಮೀಬಾಯಿ ಅವರೊಂದಿಗೆ ಹುಬ್ಬಳ್ಳಿಯಲ್ಲಿ ವಿವಾಹ. 'ವಾಗ್ಭೂಷಣ' ಸಂಪಾದಕ ವರ್ಗದಲ್ಲಿ ಸೇರ್ಪಡೆ.

## ಸಂತತಿ

೧. : ಕ್ಷೇಮೇಂದ್ರ (ಜನನ : ೧೯೨೨ ಧಾರವಾಡ; ಮರಣ ; ೧೯೨೫)
'ಮೊದಲಿನ ಫಲವೊಂದು ಮೀಸಲು ಮಣ್ಣಿಗೆ.'

೨. : ರಾಮು (ಜನನ ೧೯೨೪ ಹಾನಗಲ್ಲ : ಮರಣ ೧೯೪೪)
'ಹುಸಿನಗುವ ಕೂಸಿನ ಹೊಸ ಹೊಸ ಆಟಿಕೆ.'

೩. : ಭಾಸ್ಕರ (ಜನನ ೧೯೨೬ ಧಾರವಾಡ ; ಮರಣ ೧೯೨೬)
'ಭೆಟ್ಟಿಗೆ ಬಂದನು ಹೊಸದೊಬ್ಬ ಕಂದನು ಅಥಿತಿಯೋ ಎಂಬಂತೆ.'

೪. : ಪಾಂಡುರಂಗ (ಜನನ:೧೯೨೮, ಧಾರವಾಡ ಮರಣ : ೧೮-೧೧-೨೦೦೩)
'ಹುಡುಗನ ಒಡನಾಟವು ಹುಡುಗಾಟ ಮಾಡಿದವು.'

೫. : ಲಲಿತಾ (೧೯೩೪, ಧಾರವಾಡ; ಮರಣ ೧೯೩೪)
'ಆ ಕೂಸ ಕಳಕೊಂಡು ನೀನೆಂತೊ ಉಳಕೊಂಡು
ಲಾಲಿತ್ಯವಿಲ್ಲದ ಶೈಲಿಯೊಲು.'
('ನೀ ಹಿಂಗ ನೋಡಬ್ಯಾಡ ನನ್ನ' ಕವನದ ವಸ್ತು)

೬. : ವಾಮನ (ಜನನ : ೧೯೩೫, ರಾಣೆಬೆನ್ನೂರು ; ಮರಣ : ಪು|| ೨೬-೯-೨೦೧೬ ಹುಬ್ಬಳ್ಳಿ)

೭. : ಪ್ರೇಮಾ (ಜನನ : ೧೯೩೮, ಧಾರವಾಡ; ಮರಣ : ೧೯೩೮)

೮. : ಮಂಗಲಾ (ಜನನ : ೧೯೩೯, ಧಾರವಾಡ)

೯. : ಆನಂದ (ಜನನ : ೧೯೪೩, ಧಾರವಾಡ; ಮರಣ : ೧೯೪೪)

## ಇತರ

೧೯೨೨ : ದಾವಣಗೇರಿಗೆ ಸಾಹಿತ್ಯ ಸಮ್ಮೇಲನಕ್ಕೆ ಹೋದದ್ದು.

೧೯೨೨ : ''ಕೃಷ್ಣಾಕುಮಾರಿ'' ಮೊದಲನೆಯ ಆವೃತ್ತಿ ಪ್ರಕಟವಾದದ್ದು.

೧೯೨೩ : ವಿಜಾಪೂರದ ಸಾಹಿತ್ಯ ಸಮ್ಮೇಲನಕ್ಕೆ ಹೋದದ್ದು.
'ಜಯ ಕರ್ನಾಟಕ' ಪತ್ರಿಕೆಯೊಂದಿಗೆ ಸಂಬಂಧ, ಮಧುರಚೆನ್ನರ ಭೆಟ್ಟಿ..

೧೯೨೪ : ತಾಯಿ-ಪಾರ್ವತಿ-ಅಂಬಿಕೆ ತೀರಿಕೊಂಡದ್ದು,
'ತಾಯಿ ಗಿಡವು ಮಾಯವಾಯಿತಲೇ!'
- 'ಜೇನುಹುಟ್ಟು' ಕೈ ಬರಹ ಪತ್ರಿಕೆ ಎಳೆಗೆಳೆಯರಾದ ವಿದ್ಯಾರ್ಥಿಗಳ ಮೂಲಕ ಹೊರಡಿಸಿದ್ದು.

೧೯೨೬ : 'ಸ್ವಧರ್ಮ' ಪತ್ರಿಕೆಯ ಸಂಪಾದಕರು.
- ಗೆಳೆಯರ ಗುಂಪಿನಿಂದ ನಾಡ ಹಬ್ಬ ಪ್ರಾರಂಭ.

೧೯೨೮ : 'ನನ್ನದು ಈ ಕನ್ನಡ ನಾಡು' ಕವನ ಸಂಗ್ರಹದ ಸಂಪಾದಕರು.

೧೯೨೯ : i) ಕಕ್ಕ ಬಂಡೋಪಂತ ಬೇಂದ್ರೆಯವರು ದ. ರಾ. ಬೇಂದ್ರೆಯವರಿಗೆ ೫-೧೧-೧೯೨೯ ರಂದು ವಾಸಕ್ಕಾಗಿ ಸಾಧನಕೇರಿಯಲ್ಲಿ ಒಂದು ಮನೆಯನ್ನು ಕಾಣಿಕೆಯಾಗಿ ಕೊಡಿಸಿದ್ದು.
೧೩, ಶ್ರೀಮಾತಾ, ಸಾಧನಕೇರಿ, ಧಾರವಾಡ - ನಿವಾಸ.
'ಮಲೆನಾಡ ಸೆರಗಿನ ನೆರೆಗಿದ್ದ ಮನೆಯೊಂದು ಮಮತೆಯ
ಕುರುಹಾಗಿ ತಾ ದೊರಕಿತು.'

ii) ಬೆಳಗಾವಿಯ ಸಮ್ಮೇಳನದಲ್ಲಿ -
'ಹಕ್ಕಿ ಹಾರುತಿದೆ ನೋಡಿದಿರಾ' ಕವನ ವಾಚನ.

iii) ೧೧-೧೧-೧೯೨೯ ರಂದು ಶ್ರೀ ಆಲೂರ್ ವೆಂಕಟರಾವ್ ಇವರಿಂದ 'ಜಯ ಕರ್ನಾಟಕ' ಕೊಂಡದ್ದು.
ಸಂಪಾದಕರಾಗಿ ಕಾರ್ಯ ನಿರ್ವಹಣೆ.
''ಜಯ ಕರ್ನಾಟಕವೆನ್ನುತ ಗೆಳೆಯರ ಕನ್ನಡವಾಸೆಯು ಗುಡಿಕಟ್ಟಿತು.''
'ನರಬಲಿ' - ಕವನವು ಬಲಿಮಾಡಿತೆನ್ನನು,
ಹೆಳವನಿದ್ದಲ್ಲಿಗೆ ಹೊಳೆ ಬಂದಿತು.''

೧೯೩೦ : 'ಹಕ್ಕಿ ಹಾರುತಿದೆ' ಕವನ ಸಂಗ್ರಹದ ಸಂಪಾದಕರು.

೧೯೩೨ : ಹಿಂಡಲಗಿ ಜೇಲುವಾಸ. ಮುಗದ ಎಂಬ ಹಳ್ಳಿಯಲ್ಲಿ ದಿಗ್‌ಬಂಧನವಾಸ.
''ಪ್ರಾಣದ ಒಗರಷ್ಟು ಹಿಂಡಿತು ಹಿಂಡಲಗಿ,
ಮುಗದದ ಮಳೆಗಾಗಿ ಮುಂದೆಳೆದಿತು.''

೧೯೩೨ : ''ಗರಿ'' ಮೊದಲನೆಯ ಆವೃತ್ತಿಯು ಹೊರ ಬಂದದ್ದು.

೧೫-೮-೧೯೩೩ : 'ಜಯ ಕರ್ನಾಟಕ' ಸಂಬಂಧ ಮುಕ್ತಾಯ.
ಗೆಳೆಯರ ಗುಂಪಿನ ಸೊತ್ತೋಟ, ವಿಘಟನೆ.

೧೯೩೩ : ಎಂ. ಎ. ಅಭ್ಯಾಸಕ್ಕಾಗಿ ಪುಣೆಗೆ ಪ್ರಯಾಣ.
'ಪುಣೆಯಲ್ಲಿ ಕಳೆದಂಥ ಅಜ್ಞಾತವಾಸವ ನೆನೆದರೆ ಮೈಯೆಲ್ಲ ಜುಮ್ಮೆನ್ನುತ್ತ'

೧೯೩೪ : ''ಮೂರ್ತಿ'' ಮೊದಲನೆಯ ಆವೃತ್ತಿ ಪ್ರಕಟವಾದದ್ದು.

೧೯೩೪ : ''ಕಾಮಕಸ್ತೂರಿ'' ಮೊದಲನೆಯ ಆವೃತ್ತಿ ಪ್ರಕಟವಾದದ್ದು.

೧೯೩೫ : ಎಂ. ಎ. ಪದವಿ ಪಡೆದದ್ದು,
ಮುಂಬೈಯಲ್ಲಿ ಸಾಹಿತ್ಯ ಸಮ್ಮೇಳನದ ಕವಿ ಸಮ್ಮೇಳನಕ್ಕೆ ಅಧ್ಯಕ್ಷ.

೧೯೩೫-೪೦ : ಡಾ॥ ಮಾಸ್ತಿಯವರ ಸಹಾಯ ಹಸ್ತ ಲಭಿಸಿದ್ದು.
''ದೈವದ ಕೃಪೆಯೆಂದು ಅದ ತಿಳಿದೆನು.''

೧೯೩೬ : ವಿಜಯನಗರ ಷಟ್ ಶತಸಾಂವತ್ಸರಿಕ ಉತ್ಸವದ ಕೆಲಸಕ್ಕಾಗಿ
ಹೈದರಾಬಾದ ಪ್ರವಾಸ.

೧೯೩೭ : 'ಸಖೀಗೀತ'ವ ಮೊದಲನೆಯ ಆವೃತಿ ಪ್ರಕಟಗೊಂಡದ್ದು.

೧೯೩೮ : ನಾದಲೀಲೆ, ಉಯ್ಯಾಲೆ, ಪ್ರಕಟಗೊಂಡದ್ದು,
''ಜೀವನ'' ಪತ್ರಿಕೆಯ ಸಂಪಾದಕ ಆದದ್ದು.

೧೯೩೯ : ''ನಿರಾಭರಣ ಸುಂದರಿ,'' ಹಾಗೂ ''ಸಾಹಿತ್ಯ ಮತ್ತು ಸಂಶೋಧನೆ,''
ಕೃತಿಗಳು ಪ್ರಕಟಗೊಂಡದ್ದು.

೧೯೪೦ : ಧಾರವಾಡದಲ್ಲಿ ಸಾಹಿತ್ಯ ಸಮ್ಮೇಳನ.

೧೯೪೧ : ಗದಗ-ವಿದ್ಯಾದಾನ ಸಮಿತಿ ಹೈಸ್ಕೂಲಿಗೆ-ಹೆಡ್ ಮಾಸ್ತರ ಆಗಿ ಹೋದದ್ದು.

೧೯೪೨ : ಹುಬ್ಬಳ್ಳಿಯ ನ್ಯೂ ಇಂಗ್ಲೀಷ್ ಸ್ಕೂಲಿಗೆ ಶಿಕ್ಷಕ.

೧೯೪೩ : ಫೆಬ್ರುವರಿಯಲ್ಲಿ ಪಾಂಡಿಚೇರಿ-ಶ್ರೀಮಾತಾರವಿಂದರ ದರ್ಶನ.
- ಪೂನಾ ಬಿ. ಎಂ. ಸಿ. ಸಿ. ಕಾಲೇಜಿನಲ್ಲಿ ಕನ್ನಡ ಪ್ರಾಧ್ಯಾಪಕ,
''ಮೇಘದೂತ'' ಪ್ರಕಟಗೊಂಡದ್ದು.

೧೯೪೪ : ಸೊಲ್ಲಾಪುರದ ಡಿ. ಏ. ವ್ಹಿ. ಕಾಲೇಜಿನಲ್ಲಿ ಕನ್ನಡ ಪ್ರಾಧ್ಯಾಪಕ ಆದದ್ದು.

೧೯೪೪ : ರಾಮು ಹಾಗೂ ಆನಂದ ತೀರಿಕೊಂಡದ್ದು ಸೊಲ್ಲಾಪುರದಲ್ಲಿ.

೧೯೪೫ : ಸೊಲ್ಲಾಪುರ ನೀಲಾನಗರದಲ್ಲಿ ವಾಸ ಪ್ರಾರಂಭ.

೧೯೪೬ : ಗೆಳೆಯರಿಂದ ಸನ್ಮಾನ. ೫೦ನೆಯ ಹುಟ್ಟು ಹಬ್ಬ.
''ಹಾಡು-ಪಾಡು'' ಪ್ರಕಟಗೊಂಡದ್ದು.

೧೯೪೭ : ಭಾರತಕ್ಕೆ ಸ್ವಾತಂತ್ರ್ಯ ಲಭಿಸಿದ್ದು.

೧೯೪೮ : ಗಾಂದೀ ಮರಣ, ಜೆ.ಕೃಷ್ಣಮೂರ್ತಿ ಮತ್ತು
ಶ್ರೀ ಗುಳವಣಿ ಮಹಾರಾಜರ ದರ್ಶನ.

೧೯೫೦ : ಶ್ರೀಅರವಿಂದರ ನಿರ್ವಾಣ ; ಡಿಶೆಂಬರ-೫. ಹೆಂಡತಿಗೆ ವಿಷಮ ಜ್ವರ.

೧೯೫೧ : ''ಗಂಗಾವತರಣ'' ಪ್ರಕಟಗೊಂಡದ್ದು . ಸಂಖ್ಯಾಯೋಗ ವಿಚಾರ,
ಮರಾಠಿಯಲ್ಲಿ ವಿಪುಲವಾಗಿ ಬರವಣಿಗೆ.

೧೯೫೨ : ಪ್ರಭಾಕರ ಮಹಾರಾಜರ ದರ್ಶನ.

೧೯೫೩ : ಗೆಳೆಯ ಚೆನ್ನಮಲ್ಲಪ್ಪ-ಮಧುರಚೆನ್ನ-೧೫ ಅಗಸ್ಟರಂದು ಮರಣ.

೧೯೫೪ : ಶ್ರೀರಾಮದಾಸರ ದರ್ಶನ.

೧೯೫೫ : ದಿಲ್ಲಿಗೆ ಕವಿ ಸಮ್ಮೇಳನಕ್ಕಾಗಿ ಹೋದದ್ದು.



# ಡಾ.ದ.ರಾ.ಬೇಂದ್ರೆಯವರ ಸಾಹಿತ್ಯ ಕೊಡುಗೆ

## ಕವನ ಸಂಗ್ರಹಗಳು-'ಅರಳು ಮರಳು' ಪೂರ್ವದಲ್ಲಿ - ೧೦

೧. ಕೃಷ್ಣಕುಮಾರಿ
೨. ಗರಿ
೩. ಸಖೀಗೀತ
೪. ಮೂರ್ತಿ
೫. ಕಾಮಕಸ್ತೂರಿ
೬. ಉಯ್ಯಾಲೆ
೭. ನಾದಲೀಲೆ
೮. ಕನ್ನಡ ಮೇಘದೂತ
೯. ಹಾಡು-ಪಾಡು
೧೦. ಗಂಗಾವತರಣ

## ಕವನ ಸಂಗ್ರಹಗಳು-'ಅರಳು ಮರಳು' ಅನಂತರದಲ್ಲಿ - ೧೭

೧೧. ಸೂರ್ಯಪಾನ
೧೨. ಹೃದಯ ಸಮುದ್ರ
೧೩. ಮುಕ್ತಕಂಠ
೧೪. ಚೈತ್ಯಾಲಯ
೧೫. ಜೀವಲಹರಿ
೧೬. ಅರಳು ಮರಳು*
೧೭. ನಮನ
೧೮. ಸಂಚಯ
೧೯. ಉತ್ತರಾಯಣ
೨೦. ಮುಗಿಲ ಮಲ್ಲಿಗೆ
೨೧. ಯಕ್ಷಯಕ್ಷಿ
೨೨. ನಾಕುತಂತಿ**
೨೩. ಮರ್ಯಾದೆ
೨೪. ಶ್ರೀಮಾತಾ
೨೫. ಇದು ನಭೋವಾಣಿ
೨೬. ಮತ್ತೆ ಶ್ರಾವಣಾ ಬಂತು
೨೭. ಚತುರೋಕ್ತಿ ಮತ್ತು ಇತರ ಕವನಗಳು.

*ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ , **ಜ್ಞಾನಪೀಠ ಪ್ರಶಸ್ತಿ.

## ಮರಣೋತ್ತರ ಕವನ ಸಂಕಲನಗಳು - ೮

೨೮. ಪರಾಕಿ
೨೯. ಕಾವ್ಯವೈಖರಿ
೩೦. ತಾ ಲೆಕ್ಕಣಿಕೆ ತಾ ದೌತಿ
೩೧. ಬಾಲಬೋಧೆ
೩೨. ಪ್ರತಿಬಿಂಬಗಳು
೩೩. ರತಸಾನ
೩೪. ಭೂ ದೈವತಗಳು
೩೫. ಹೃದಯಗೀತ ([illegible])

## ಆಯ್ದ ಕವನ ಸಂಕಲನಗಳು - ೧೦

೩೬. ಬಾ ಹತ್ತರ
೩೭. ವಿನಯದ
೩೮. ಒಲವೆ ನಮ್ಮ ಬದುಕು
೩೯. ಚೈತನ್ಯದ ಪೂಜೆ
೪೦. ಶ್ರಾವಣ ಪ್ರತಿಭೆ
೪೧. ಕುಣಿಯೋಣು ಬಾ
೪೨. ಸಮರಸವೇ ಜೀವನ
೪೩. ನಾಕಿನಾ ಕನಸು
೪೪. ನೂರು ಮರ ನೂರು ಸ್ವರ ಒಂದೊಂದು ಅತಿ ಮಧುರ.
೪೫. ಬೇಂದ್ರೆ ಕಂಡ ರವೀಂದ್ರರು

## ದ. ರಾ. ಬೇಂದ್ರೆ ಜೀವನ ಮಹಾಕಾವ್ಯ : ಅಂಬಿಕಾತನಯದತ್ತರ ಸಮಗ್ರ ಕಾವ್ಯ : "ಔದುಂಬರಗಾಥೆ"

(ವರಕವಿ ಡಾ||ದ.ರಾ.ಬೇಂದ್ರೆ ಸಂಶೋಧನ ಸಂಸ್ಥೆಯು ಪ್ರಕಟಣೆಗಳು ೧೪ ಸಂಪುಟಗಳು)

೪೬. ಸಮನ ಸಂಪುಟ
೪೭. ದರ್ಶನ ಸಂಪುಟ
೪೮. ವಿಕಾಸ ಸಂಪುಟ
೪೯. ವಿನ್ಯಾಸ ಸಂಪುಟ
೫೦. ತತ್ತ್ವ ಸಂಪುಟ
೫೧. ಸಿದ್ಧಾಂತ ಸಂಪುಟ
೫೨. ಶ್ರೀಮಾತಾರವಿಂದ ಪ್ರಜ್ಞಾಪ್ರಕಾಶ
೫೩. ಸಮಗ್ರ ಸಮೀಗೀತ

### ಬೇಂದ್ರೆ, ಗದ್ಯ ಸಾಹಿತ್ಯ ಸಂಪುಟಗಳು

೫೪. ದ. ರಾ. ಬೇಂದ್ರೆ ಸಮಗ್ರ ನಾಟಕ ಸಂಪುಟಗಳು ೯, ೧೦, ೧೧
೫೫. ಕಾವ್ಯೋದ್ಯೋಗ ಸಿದ್ಧಾಂತ ಸಂಪುಟ-೧೨
೫೬. ಸಾಹಿತ್ಯಯೋಗ ಸಿದ್ಧಾಂತ ಭಾಗ-೧ ಸಂಪುಟ-೧೩
೫೭. ಸಾಹಿತ್ಯಯೋಗ ಸಿದ್ಧಾಂತ ಭಾಗ-೨ ಸಂಪುಟ-೧೪

## ವರಕವಿ ದ. ರಾ. ಬೇಂದ್ರೆ ಸಂಗೀತ ಅಕಾಡೆಮಿ ಪ್ರಕಟಣೆಗಳು-೧೫

ಹಿಂದುಸ್ಥಾನಿ ಶಾಸ್ತ್ರೀಯ ಸಂಗೀತ ಸಂಯೋಜನೆಗಳೊಂದಿಗೆ ಬೇಂದ್ರೆ ಗೇಯ ಗೀತಗಳ ಸಂಗ್ರಹಗಳು.

೫೮. ಅಂಬಿಕಾತನಯನ ಹಾಡು ಬೆಳದಿಂಗಳ ನೋಡು
೫೯. ನೋಡ್ಯಾನು ದಶಾವತಾರ ಅಂಬಿಕಾತನಯ ಹಾಡ್ಯಾನು
೬೦. ಅಂಬಿಕಾತನಯದತ್ತ ಬೇಂದ್ರೆ ಕಂಡ ಬೆಸಕ
೬೧. ಅಂಬಿಕಾತನಯದತ್ತ ಬೇಂದ್ರೆ ಕಂಡ ಶ್ರಾವಣ
೬೨. ಅಂಬಿಕಾತನಯದತ್ತ ಬೇಂದ್ರೆ ಕಂಡ ಋತು ದರ್ಶನ
೬೩. ಅಂಬಿಕಾತನಯದತ್ತ ಬೇಂದ್ರೆ ಕಂಡ ಶ್ರೀಮಾತಾರವಿಂದರು
೬೪. ಅಂಬಿಕಾತನಯದತ್ತ ಬೇಂದ್ರೆ ಕಂಡ ನಾಳಿನಾ ನಾಳಿನಾ ಕನಸು
೬೫. ಅಂಬಿಕಾತನಯದತ್ತ ಬೇಂದ್ರೆ ಕಂಡ ಭಾವ ರಾಗ ಮಂಜರಿ
೬೬. ಅಂಬಿಕಾತನಯದತ್ತ ಬೇಂದ್ರೆ ಕಂಡ ನಾದ ನವನೀತ
೬೭. ಬೇಂದ್ರೆ ರಂಗ ಗೀತಗಳು
೬೮. ಅಂಬಿಕಾತನಯಹಾಡಿದನೆಂದರೆ ಹೂವುಗಳರಳುವವು
೬೯. ಇಂದಂದಿನದಲ್ಲೀ ಹಾಡು; ನಾಡಿದಿನ ಕನ್ನಡ ನಾಡು
೭೦. ಅಂಬಿಕಾತನಯದತ್ತರು ಕಂಡ ಭಾರತ ದರ್ಶನ
೭೧. ಅಂಬಿಕಾತನಯದತ್ತರು ಕಂಡ ಬೇಂದ್ರೆ ನಮನ ಗೀತಗಳು
೭೨. ಬೇಂದ್ರೆ ಸಂಗೀತ-ಸಿದ್ಧಾಂತ ಪ್ರಯೋಗ

### ನಾಟಕಗಳು - ೧೬

೭೩. ದೆವ್ವನ ಮನೆ
೭೪. ಹಳೆಯ ಗೆಳೆಯರು
೭೫. ಸಾಯೋ ಆಟ
೭೬. ತಿರುಕರ ಪಿಡುಗು
೭೭. ಗೋಲ್
೭೮. ಉದ್ಧಾರ
೭೯. ನಗೆಯ ಹೊಗೆ
೮೦. ಮಂದೀ ಮದಿವಿ
೮೧. ಮಂದೀ ಮಕ್ಕಳು
೮೨. ಮಂದೀ ಮನಿ
೮೩. ಅ ಘದಾ ಈ ಘದಾ
೮೪. ಶೋಭನಾ
೮೫. ಜಾತ್ರೆ
೮೬. ಮಕ್ಕಳು ಅಡಗಿ ಮನೆ ಹೊಕ್ಕರೆ

೮೭. ತಲೆ ದಂಡ (ಬಸವಣ್ಣನವರ ಜೀವನ ಆಧರಿಸಿ) ೮೮. ಪ್ರತಿಮಾಗೃಹ (ಮಹಾಕವಿ ಭಾಸನ 'ಪ್ರತಿಮಾ' ನಾಟಕ ಆಧರಿಸಿ)

## ಬೇಂದ್ರೆ ಮಾನಸ ನಾಟಕಗಳು - ೨

೮೯. ಮಿಸ್ ಫಾರ್ಚ್ಯುನ್ - ಪ್ರೊ॥ ಕೆ. ಎಸ್. ಶರ್ಮಾ ವಿರಚಿತ

೯೦. ಕರೆ ಹೆಂಡತಿ ಆದರ ಖರೆ ಹೆಂಡತಿ - ಪ್ರೊ॥ ಎನ್. ಕೆ. ಕುಲಕರ್ಣಿ ವಿರಚಿತ

## ಹರಟೆ, ನಗೆ, ಕಥೆ - ೨

೯೧. ನಿರಾಭರಣ ಸುಂದರಿ

೯೨. ಚೀನದ ಬಾಳು ಬದುಕು (ಅನುವಾದಿತ ಕಥಾ ಸಂಕಲನ)

## ವಿಮರ್ಶೆ - ೧೧

೯೩. ಸಾಹಿತ್ಯ ಮತ್ತು ವಿಮರ್ಶೆ

೯೪. ಸಾಹಿತ್ಯ ಸಂಶೋಧನೆ

೯೫. ವಿಚಾರ ಮಂಜರಿ

೯೬. ಕವಿ ಲಕ್ಷ್ಮೀಶನ ಜೈಮಿನಿ ಭಾರತಕ್ಕೆ ಮುನ್ನುಡಿ

೯೭. ಮಹಾರಾಷ್ಟ್ರ ಸಾಹಿತ್ಯ

೯೮. ಕಾವ್ಯೋದ್ಯೋಗ

೯೯. ಕುಮಾರವ್ಯಾಸ (ಪುಸ್ತಿಕೆ)

೧೦೦. ಸಾಹಿತ್ಯದ ವಿರಾಟ್ ಸ್ವರೂಪ

೧೦೧. ಕನ್ನಡ ಸಾಹಿತ್ಯದಲ್ಲಿ ನಾಲ್ಕು ನಾಯಕ ರತ್ನಗಳು

೧೦೨. ಸಾಹಿತ್ಯ ಯೋಗ (ಆಯ್ದ ವಿಮರ್ಶ ಲೇಖನ ಸಂಗ್ರಹ)

೧೦೩. ಶ್ರೀ ಅರವಿಂದ ಯೋಗ, ಆಶ್ರಮ ಮತ್ತು ತತ್ತ್ವೋಪದೇಶ. (ಶ್ರೀ ಅರವಿಂದರನ್ನು ಕುರಿತು ಪರಿಚಯ ಪುಸ್ತಿಕೆ)

## ಸಂಪಾದನೆ - ೬

೧೦೪. ನನ್ನದು ಈ ಕನ್ನಡ ನಾಡು

೧೦೫. ಹಕ್ಕಿ ಹಾರುತಿದೆ

೧೦೬. ಹೊಸಗನ್ನಡ ಕಾವ್ಯಶ್ರೀ

೧೦೭. ರವೀಂದ್ರ ಪ್ರಶಸ್ತಿ

೧೦೮. ಕನಕದಾಸ ಚತುಶ್ಯತಮಾನೋತ್ಸವ ಸಂಸ್ಮರಣ ಸಂಪುಟ

೧೦೯. ಚಂದ್ರಹಾಸ

## ಸಂಪಾದಿತ ಪತ್ರಿಕೆಗಳು - ೪

೧೧೦. ವಾಗ್ಭೂಷಣ

೧೧೧. ಸ್ವಧರ್ಮ

೧೧೨. ಜಯ ಕರ್ನಾಟಕ

೧೧೩. ಜೀವನ

## ಅನುವಾದ ಕನ್ನಡಕ್ಕೆ - ೬

೧೧೪. ಉಪನಿಷತ್ ರಹಸ್ಯ ಅಥವಾ ಭಾರತೀಯ ಅಧ್ಯಾತ್ಮ ಶಾಸ್ತ್ರ
ಪೀಠಿಕೆ - ರಂ. ರಾ. ದಿವಾಕರ ಹಾಗೂ ಶಂ. ಬಾ. ಜೋಶಿ

೧೧೫. ಭಾರತೀಯ ನವಜನ್ಮ

೧೧೬. ಗುರು ಗೋವಿಂದಸಿಂಗ

೧೧೭. ಕಬೀರ ವಚನಾವಲಿ

೧೧೮. ಭಗ್ನ ಮೂರ್ತಿ

೧೧೯. ನೂರೊಂದು ಕವನಗಳು

## ಮರಾಠಿಯಲ್ಲಿ - ೬

೧೨೦. ಸಂವಾದ

೧೨೧. ವಿಠಲ ಸಂಪ್ರದಾಯ

೧೨೨. ಶಾಂತಲಾ (ಕಾದಂಬರಿ)

೧೨೩. ಸಂತ ಮಹಂತ ಪೂರ್ಣಶಂಭು ವಿಠಲ(ಪ್ರಬಂಧ)

೧೨೪. ವಿಠ್ಠಲ ಪಾಂಡುರಂಗ (ಕವನ ಸಂಗ್ರಹ)

೧೨೫. ಉಮಾಳಾ (೧೧೩ ಮರಾಠಿ ಕವನಗಳ ಸಂಗ್ರಹ)

## ಇತರ - ೨

೧೨೬. ಮಾತೆಲ್ಲ ಜ್ಯೋತಿ (ಭಾಷಣಗಳ ಸಂಗ್ರಹ)
೧೨೭. ಮತ-ಧರ್ಮ ಮತ್ತು ಆಧುನಿಕ ಮಾನವ (ಭಾಷಣಗಳ ಸಂಗ್ರಹ).

## ಇಂಗ್ಲಿಷ ಕೃತಿಗಳು - ೨

128. A Theory of Immortality
129. Language-Mathematics & Truth.

## ಬೇಂದ್ರೆ ಕವನಗಳು ವಿವಿಧ ಭಾಷೆಗಳಲ್ಲಿ ಅನುವಾದ - ೮

130. Dr. D. R. Bendre - Four Strings - ಇಂಗ್ಲಿಷ ಭಾಷೆಯಲ್ಲಿ
131. ಚತುರ್ಮುಖಿ ಸೌಂದರ್ಯ, ಲೀಲೆ, ಕೀರ್ತಿ - ಜರ್ಮನ್ ಭಾಷೆಯಲ್ಲಿ
132. ಚಾರ್ ತಾರ್ - 'ನಾಕು ತಂತಿ'ಯ ಹಿಂದೀ ಅನುವಾದ
133. ಚಾರ ತಂತು - 'ನಾಕು ತಂತಿ'ಯ ಮರಾಠಿ ಅನುವಾದ
134. Spring Fire
135. Dreaming Tomorrow
136. Three one Act Plays
137. Sakheegeet

Dr. K. Raghavendra Rao
Dr. Vaman Bendre
Dr. K. S. Sharma

## ಪೂರಕ ಓದು - ೧೧

೧. ಕುವಲಯ ಕಂಡ ಅಂದತ್ತ - ಡಾ|| ಕೆ. ಎಸ್. ಶರ್ಮಾ
೨. ಸಂವಾದ ಕಂಡ ಅಂದತ್ತ - ಡಾ|| ವಾಮನ ಬೇಂದ್ರೆ
೩. ನಾ ಕಂಡ ಬೇಂದ್ರೆ - ಡಾ|| ಜೀವಿ ಕುಲಕರ್ಣಿ
೪. ಬೇಂದ್ರೆ ಸಮಗ್ರ ಕಾವ್ಯದರ್ಶನ - ಡಾ|| ಜೀವಿ ಕುಲಕರ್ಣಿ
೫. ಮಂಗಳ ಲೋಕದ ಅಂಗಳಕೇರಿ - ಡಾ|| ಜೀವಿ ಕುಲಕರ್ಣಿ
೬. ಬೇಂದ್ರೆ ಕಾವ್ಯದಲ್ಲಿ ಆಧ್ಯಾತ್ಮದ ನೆಲೆ ಮತ್ತು ಆರ್ಷ ದೃಷ್ಟಿ - ಪ್ರೊ|| ಕೆ. ಎಸ್.ನಾರಾಯಣಾಚಾರ್ಯ
೭. ಕವಿವರ್ಯ ಬೇಂದ್ರೆ ನಿರೂಪಿಸಿದ ಸಾಹಿತ್ಯ ವಿಮರ್ಶಾ ಸೂತ್ರಗಳು- ಪ್ರೊ|| ಕೆ. ಎಸ್.ನಾರಾಯಣಾಚಾರ್ಯ
೮. ಬೇಂದ್ರೆ ಒಳನೋಟ - ಡಾ|| ಜೀವಿ ಕುಲಕರ್ಣಿ
೯. ದ. ರಾ. ಬೇಂದ್ರೆ ಸಮಗ್ರ ಕಾವ್ಯ ನಿಘಂಟು - ಡಾ|| ಬಿ. ಬಿ. ರಾಜಪುರೋಹಿತ
೧೦. ದ. ರಾ. ಬೇಂದ್ರೆ ಕಾವ್ಯದ ವ್ಯಾಕರಣ - ಡಾ|| ಬಿ. ಬಿ. ರಾಜಪುರೋಹಿತ
೧೧. ಬೇಂದ್ರೆ ಕಾವ್ಯದ ನುಡಿಗಟ್ಟು ಕೋಶ - ಡಾ|| ಬಿ. ಬಿ. ರಾಜಪುರೋಹಿತ
೧೨. ಬೇಂದ್ರೆ ಕಾವ್ಯ ಜೀವಕೋಶ - ಡಾ|| ಬಿ. ಬಿ. ರಾಜಪುರೋಹಿತ
೧೩. ಕಾವ್ಯವು ಉದ್ಯೋಗವಲ್ಲ ; ಉದ್+ಯೋಗ-ಡಾ|| ಬಿ. ಬಿ. ರಾಜಪುರೋಹಿತ
೧೪. ಬೇಂದ್ರೆಯವರ ಧಾರವಾಡ - ಡಾ|| ಬಿ. ಬಿ. ರಾಜಪುರೋಹಿತ
೧೫. ಬೇಂದ್ರೆ ಸಾಂಖ್ಯ ಚಿಂತನ - ಡಾ|| ಸದಾನಂದ ನಾಯಕ
೧೬. ಬೇಂದ್ರೆ ಕಲಾಂಯೋಗ (ಬೇಂದ್ರೆಯಿಸಮ್) - ಸುರೇಶ ಕುಲಕರ್ಣಿ

: ಪುಸ್ತಕಗಳು ದೊರೆಯುವ ಸ್ಥಳ :
"ಶ್ರೀಮಾತಾ ಪ್ರಕಾಶನ","ವಿಶ್ವಶ್ರಮ ಚೇತನ",ಗೋಕುಲ ರಸ್ತೆ,ಬಸವೇಶ್ವರ ನಗರ, ಹುಬ್ಬಳ್ಳಿ.
ರವೀಂದ್ರ ಪುಸ್ತಕಾಲಯ, ಚಾಮರಾಜಪೇಟೆ, ಸಾಗರ - ೫೭೭ ೪೦೧,
ಶಿವಮೊಗ್ಗ ಜಿಲ್ಲೆ, ದೂರವಾಣಿ : ೦೮೧೮೩-೨೨೮೭೧೬ (ಕ).



## ಅಂಬಿಕಾತನಯದತ್ತರ

# ಕುಣಿಯೋಣು ಬಾ

ಬೇಂದ್ರೆ ಸಂಶೋಧನ ಸಂಸ್ಥೆಯ ಸಹ-ನಿರ್ದೇಶಕರಾಗಿದ್ದ, ವರಕವಿ ಡಾ|| ದ.ರಾ. ಬೇಂದ್ರೆಯವರ ಚಿರಂಜೀವಿಗಳೂ ಆದ ಡಾ|| ವಾಮನ ಬೇಂದ್ರೆಯವರು, ಅಂಬಿಕಾತನಯದತ್ತರ ಸಮಗ್ರ ಕಾವ್ಯದ 1427 ಕವನಗಳಲ್ಲಿ ಚಿಕ್ಕ ಮಕ್ಕಳಿಗಾಗಿ 55 ಕವನಗಳನ್ನು ಆಯ್ದು, "ಕುಣಿಯೋಣು ಬಾ" ಎಂಬ ಶಿರೋನಾಮದಲ್ಲಿ ಸಂಗ್ರಹಿಸಿ, ಸಮರ್ಪಿಸಿದ್ದಾರೆ. ವರಕವಿ ಅಂಬಿಕಾತನಯದತ್ತರ ಕವನ ರಾಶಿಯಲ್ಲಿ ಅಡಗಿರುವ ಜ್ಞಾನ ಸಾರವನ್ನು ಬಿಂಬಿಸುವ ಈ 55 ಕವನಗಳು ಚಿಕ್ಕ ಮಕ್ಕಳಲ್ಲಿ ಮಹಾಕವಿ ಬೇಂದ್ರೆಯವರ ಜೀವನ ಸಿದ್ಧಾಂತದ ಬೀಜವನ್ನು ಬಿತ್ತುವಂತೆ ರೂಪಿಸಿದ್ದಾರೆ. ನವ ಮಾನವೀಯತೆಯನ್ನು ಮಕ್ಕಳು ಬಾಲ್ಯದಿಂದಲೇ ರೂಢಿಸಿಕೊಂಡರೆ, ಭವಿಷ್ಯದಲ್ಲಿ ನವ ಮಾನವೀಯ ಸಮಾಜವನ್ನು ಕಟ್ಟುವ ಯೋಧರಾಗಿ ಇವರು ಬೆಳೆಯಬೇಕೆಂಬ ಉದ್ದೇಶ ಈ ಕವನ ಸಂಕಲನದ್ದಾಗಿದೆ.

-ಪ್ರಕಾಶಕರು



ಡಾ|| ದ.ರಾ.ಬೇಂದ್ರೆ ಸಂಶೋಧನ ಸಂಸ್ಥೆ,
ಹುಬ್ಬಳ್ಳಿ.